# ಸಿದ್ಧಗಂಗಾ




" ಶ್ರೀ ಕ್ಷೇತ್ರದಲ್ಲಿ ಜರುಗಿದ ಸುವರ್ಣ ಮಹೋತ್ಸವ
ಸಮಾರೋಪ ಸಮಾರಂಭದ ಸಂದರ್ಭದಲ್ಲಿ "
...ದ್ರ ರೈಲ್ವೆ ಖಾತೆ ರಾಜ್ಯ ಸಚಿವರಾದ ಸಿ. ಕೆ. ಜಾಫರ್ ಷರೀಫ್‌ರವರು ಹಾಗು
...ಜಿ ಉಪರಾಷ್ಟ್ರಪತಿ ಬಿ. ಡಿ. ಜತ್ತಿಯವರು. ಶ್ರೀ ಶ್ರೀಗಳವರು. ಕರ್ನಾಟಕ
ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಕೆ. ಮಲ್ಲಣ್ಣನವರು.

ಜುಲೈ 1982

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರು
## ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

910 ಶ್ರೀಮತಿ ಗೌರಮ್ಮ
ಪ್ರೊ. ವಿದ್ಯಾ ಪ್ರಿಂಟರ್ಸ್.
ನಂ. 20, ಆಸ್ಪತ್ರೆ ರೋಡ್
ಬೆಂಗಳೂರು. 560053

911 ಶ್ರೀ ಟಿ. ಎಸ್. ಸಣ್ಣವೀರಪ್ಪ
ಅಸಿಸ್ಟೆಂಟ್ ಎಕ್ಸಿಕ್ಯುಟಿವ್
ಇಂಜಿನಿಯರ್, ರಾಣೆ ಬೆನ್ನೂರ್
ಧಾರವಾಡ ಜಿಲ್ಲೆ.

912 ಶ್ರೀ ಬಿ. ಸಿ. ಪ್ರಸಿತ್
ನಿವೃತ್ತ ಮುಖ್ಯೋಪಾಧ್ಯಾಯರು
ರಾಣೆಬೆನ್ನೂರ್
ಧಾರವಾಡ ಜಿಲ್ಲೆ.

913 ಶ್ರೀ ಎ.ಸಿ. ಜಯಣ್ಣ & ಸನ್ಸ್
ಮರ್ಚೆಂಟ್ & ಏಜೆಂಟ್ಸ್
ಚಾಮರಾಜ ಪೇಟೆ.
ದಾವಣಗೆರೆ -- 1

914 ಶ್ರೀ ಟಿ. ಎಸ್. ಶಿವರುದ್ರಯ್ಯ
ಬಸ್ಯಂಡಹಳ್ಳಿ
ಕಡಬಗೆರೆ ಪೋಸ್ಟ್
ಬೆಂಗಳೂರು. ಜಿಲ್ಲೆ

915 ಶ್ರೀ ಟಿ. ರಾಜಶೇಖರಯ್ಯ
ಮಾರಗೊಂಡನಹಳ್ಳಿ
ತಿಪಟೂರು ತಾಲ್ಲೋಕ್
ತುಮಕೂರು. ಜಿಲ್ಲೆ.

916 ಶ್ರೀ ಜಿ. ಸೋಮಶೇಖರ್
ಮಲ್ಲಿಕಾರ್ಜುನ ನಿಲಯ
ರವೀಂದ್ರ ನಗರ
ಶಿವಮೊಗ್ಗ. 577201

917 ಶ್ರೀ ಎಂ. ಎಸ್.
ನರಸಿಂಹಮೂರ್ತಿ ಮಲ್ಲಸಂ
ನಾಗಸಂದ್ರ ಪೋಸ್ಟ್
ಬೆಂಗಳೂರು. ಜಿಲ್ಲೆ.

918 ಶ್ರೀ ಸಿದ್ಧಮಲ್ಲ ಸ್ವಾಮಿಗಳ
ಸೋಮನಹಳ್ಳಿ ಮಠ
ಗುಂಡಲ್ ಪೇಟೆ. ತಾಲೋ
ಮೈಸೂರು. ಜಿಲ್ಲೆ.

919 ಶ್ರೀ ಜಿ. ಎಸ್. ಶಾಂತಬಸವ
ಮನೆ. ನಂ. 968, 2ನೇ ರ
ವಿಜಯನಗರ
ಬೆಂಗಳೂರು. 560040.

# ಸಿದ್ಧಗಂಗಾ

ಸಂಪುಟ-೧೮ ಸಂಚಿಕೆ-೨ ಜುಲೈ, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

 

ಅಜಾತನ ಜಾತನ ಜಾತನೆಂಬೆನು
ಅಜಾತರಿಗೆ ಜಾತರಿಗೆ ಕುಲ ಹೊಲೆ ಇಲ್ಲೆಂಬೆನು
ಹಿರಿಯ ಮಾಹೇಶ್ವರ ನೆಂಬೆನು
ಸಮಯಾಚಾರವ ಬೆರಸಲಮ್ಮೆನು
ನಿಚ್ಚ ಪೂಜಿಸುವ ಪೂಜಕನಾನು
ಸಕಳೇಶ್ವರ ದೇವಾ, ಎನ್ನ ನಾಚಿಸಬೇಡ.

—ಸಕಳೇಶ ಮಾದರಸ.

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

"......ಕಳ್ಳನ ಮನೆಗೊಬ್ಬ
ಬಲುಗಳ್ಳ ಬಂದಡೆ......"

ಈ ವಚನದಲ್ಲಿ ಬಸವಣ್ಣನವರು ತಮ್ಮನ್ನು "ಕಳ್ಳ" ಎಂದು ಕರೆದುಕೊಂಡಿದ್ದಾರೆ. ಇಲ್ಲಿ 'ಕಳ್ಳ' ಎಂಬುದು ಉಪಲಕ್ಷಣ ವಾಚಕ. ಅರ್ಥ ನೀತಿ ಗರ್ಭಿತ ಪದ. ಬಸವಣ್ಣನವರ ದೃಷ್ಟಿಯಲ್ಲಿ ಬಸವಣ್ಣನವರು ಕಳ್ಳರೇ ಸರಿ–ಏಕೆಂದರೆ, ಒಬ್ಬ ಸಾಮಾನ್ಯ ಮನುಷ್ಯ ಯಾವುದನ್ನು ಹೊಂದಿ ಅನುಭವಿಸ ಲಾರನೊ, ಅಷ್ಟೇಕೆ ದಿನನಿತ್ಯದ ಆಹಾರಾದಿ ಅಗತ್ಯತೆಗಳನ್ನೂ ಪೂರೈಸಿಕೊಳ್ಳಲಾರನೊ, ಅಂಥಸ್ಥಿತಿಯಲ್ಲಿರುವಾಗ ನನ್ನ ಹೆಂಡ ತಿಯ ಕಿವಿಯಲ್ಲಿ ವಜ್ರದೋಲೆಗಳಿರುವುದು ಸರಿಯಲ್ಲ. ಇಂದು ಹತ್ತಾರು ಮಂದಿ ಜೀವನ ನಿರ್ವಹಣೆಯ ಸ್ವತ್ತನ್ನು ನಾಳೆಗಾಗಿ, ಅಥವಾ ಭೋಗಕ್ಕಾಗಿ ಹಣರೂಪದಲ್ಲಿ ಆಭರಣ ರೂಪದಲ್ಲಿ ಸಂಗ್ರಹ ಮಾಡುವುದಂತೂ ಮಹಾಪಾಪ. ಈ ಸಂಗ್ರಹ ಬುದ್ಧಿ ಕಾಯಕ ತತ್ತ್ವಕ್ಕೆ ವಿರೋಧ., ಈ ಮಾತನ್ನು....ಬಸವಣ್ಣ ತನ್ನ ಕಳ್ಳತನ ವನ್ನು ಬಚ್ಚಿಕೊಂಡು ಹೇಳಲಿಲ್ಲ. ತನ್ನ ಅಂತರಂಗವನ್ನು ತೆರೆದಿಟ್ಟು ತೋರಿದನು. ಆದ್ದರಿಂದಲೇ ಮತ್ತೊಬ್ಬರಿಗೆ ಉಪದೇಶ ಮಾಡುವ ಅಧಿಕಾರವೂ ಅವರ ಲ್ಲಿತ್ತು. ಇಂಥ ಆತ್ಮಪರೀಕ್ಷೆ, ಉಪದೇಶಾಧಿಕಾರಗಳನ್ನು ಇಂದಿನ ಸಮಾಜ ಸುಧಾರಕರು ಪಡೆದುಕೊಂಡಾಗಲೇ ಸಮಾಜ ಹಸನಾಗುವುದು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

## ಸಂಪಾದಕ ಮಂಡಲಿ

ಪಂ|| ಚನ್ನಪ್ಪ ರೇವೆ

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾ… ದಾಸೋಹ ವಿತರಣೆಯ ಕೆಲಸದಲ್ಲಿ ತೊ… ಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದ… ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ… ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥ… ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾ… ನೀತಿ, ಧರ್ಮ, ದರ್ಶನ, ಇತಿಹಾ… ವೈಚಾರಿಕ, ಚಿಂತನ, ನಗೆಬರೆಹ, ಹರ… ಮುಂತಾದ ಲೇಖನಗಳನ್ನು ಸದಾ ಸ್ವಾ… ತಿಸುತ್ತದೆ. ಲೇಖನಗಳು ಪುಲ್ ಸ್ಕೇ… ಸೈಜಿನ ಕಾಗದದ ಒಂದೇ ಮಗ್ಗುಲ… ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃ… ಲೇಖನಗಳನ್ನು ಪಡೆಯಲು ಸಾಕಷ್… ಅಂಚೆಚೀಟಿಯನ್ನು ಲಗತ್ತಿಸಿರಬೇಕ… ಲೇಖನಗಳು ಆಕಸ್ಮಾತ್ ಕಳೆದ… ಹೋದರೆ ಸಂಪಾದಕರು ಹೊಣೆಗಾರರಲ್ಲ… ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾ… ಕೊಳ್ಳುವ ಅಧಿಕಾರ ಸಂಪಾದಕರಿಗಿದ… ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾ… ವಿಲ್ಲ. ಅನುವಾದ, ರೂಪಾಂತರ ಲೇಖ… ಗಳಿಗೆ ಮೂಲ ಕೃತಿಕಾರರ ಅನುಮ… ಪಡೆದಿರಬೇಕು. ಸ್ವೀಕೃತ ಲೇಖನ… ಪ್ರಕಟಣೆಗೆ 'ಸಿದ್ಧಗಂಗಾ' ಅಗಿಂದಾ… ನಿಗದಿ ಪಡಿಸಿರುವ ಸಂಭಾವನೆಯನ… ಕಳುಹಿಸಿಕೊಡಲಾಗುವುದು. ಸ್ಥಿ… ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾ… ರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿ…

ಶ್ರೀ ಸಿದ್ದಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನ…

# ಸಂಪಾದಕೀಯ

ವ್ಯಕ್ತಿಯು ಎಷ್ಟೇ ದೊಡ್ಡವನಾದರೂ ಒಂದು ಮಹತ್ತರವಾದ ಪ್ರಕೃತಿ ಶಕ್ತಿಯ
ಂದೆ ಅಸಹಾಯಕನಾಗುತ್ತಾನೆ. ಪ್ರಕೃತಿದತ್ತವಾದ ಕೊಡುಗೆ ಆತನ ನೆಮ್ಮದಿ
ಳಿಗೆ ಸಹಾಯಕವಾಗಿದೆ. ಪ್ರಕೃತಿ ವಿಕೋಪ ಗೊಂಡಾಗ ಆತನ ಚಿಂತನ ಮಂಥನ
ಾವೂವೂ ಅದಕ್ಕೆ ಎದುರು ನಿಲ್ಲಲಾರವು. ಸುಮಾರು ಎರಡು ತಿಂಗಳುಗಳಿಂದ ಪ್ರಕೃ
ು ಭಯಂಕರ ರುದ್ರನರ್ತನ, ಒಂದು ಡೆಕ ಪ್ರಚಂಡ ಬಿರುಗಾಳಿ, ಮತ್ತೊಂದೆಡೆ
ವೃಷ್ಟಿ, ಇನ್ನೊಂದು ಕಡೆ ಅನಾವೃಷ್ಟಿ. ಇದರ ಪರಿಣಾಮವಾಗಿ ಸಾವುನೋವು
ು. ಆಸ್ತಿಪಾಸ್ತಿಗಳ ನಷ್ಟ. ಮನೆಮಠಗಳ ಧ್ವಂಸ ಬೀಕರ ಬರಗಾಲ.
ರನ್ನು ತಲ್ಲಣ ಗೊಳಿಸಿದ ಪ್ರಕೃತಿಯವಿಕೋಪ. ದಿನವೀಡಿ ಪತ್ರಿಕೆಗಳಲ್ಲಿ
ಣಬರುವ ದೃಶ್ಯ ನಿಜಕ್ಕೂ ಬದುಕಿನ ಬೆನ್ನೆಲುವನ್ನು ಅಲ್ಲಾಡಿಸುವಕರಾಳ ಛಾಯೆ
ಂತೆ ಕಂಡುಬರುತ್ತಿದೆ. ತತ್ಪ ಪರಿಣಾಮವಾಗಿ ಎಲ್ಲೆಲ್ಲಿಯೂ ಕಳವು ಸುಲಿಗೆ ದರೋ
ಳು ಅಧಿಕವಾಗಿ ಗೋಚರಿಸುತ್ತಿವೆ. ನೆಮ್ಮದಿಬಾಳು ಕನಸಾಗಿದೆ. ಸುಗಮವಾಗುವಂತ
ತ್ತಿನ ರಾಟೆಯ ಕೀಲಿಕೈ ದೈವದ ಹಿಡಿತದಲ್ಲಿದೆ. ಈ ರಾಟೆ ಧರ್ಮದ ತಳಹದಿಯ
ಲೆ ದಿನ ನಿತ್ಯ ಸಾಗಿಬರುತ್ತಿದೆ. ದೊಡ್ಡವರ ಅಪ್ಪಣೆಯ ಪ್ರಕಾರ ಜನತೆಯಲ್ಲಿ
ರ್ಮಾಭಿಮಾನ ಅಳಿದು ಅಧರ್ಮದ ಅವಿವೇಕ ಅತಿಯಾದಾಗ ಈವಿಧವಾದ ಪ್ರಕೃತಿ
ೋಪಗಳು ಉಂಟಾಗುತ್ತವೆ ಎಂದಿದ್ದಾರೆ. ಆದ್ದರಿಂದ ಧರ್ಮಯುತ ಬಾಳ್ವೆಯು
ತ್ತಿನ ಸಂಚಾಲನೆಗೆ ಸಹಾಯಕ. ಧಾರ್ಮಿಕ ಜೀವನಕ್ಕೆ ಕುಂದುಂಟಾದಾಗ ಭಗವಂ
ು ಅತಿವೃಷ್ಟಿ ಅನಾವೃಷ್ಟಿಗಳನ್ನುಂಟುಮಾಡುತ್ತಾನೆಂದು ನಮ್ಮ ಪೌರಾಣಿಕ ನಂಬಿಕೆ.
ಉದಾತ್ತನಂಬಿಕೆಯು ನಮ್ಮ ನೆಮ್ಮದಿಯ ಬಾಳಿಗೆ ಪೂರಕ. ಅಷ್ಟೇತಾರಕ. ಇದಿಲ್ಲದೇ
ೀದಾಗ. ನಮ್ಮ ಬಾಳಿನ ಮಾರಣಹೋಮ ನಮ್ಮ ಕಣ್ಣು ಮುಂದೆಯೇನಡೆದು ಹೋ
ವುದರಲ್ಲಿ ಸಂದೇಹವಿಲ್ಲ. ಹಾಗೆಲ್ಲಾ ನಡೆಯುತ್ತಿರುವುದನ್ನು ಕಂಡಾಗಲೂ ದೊಡ್ಡ
ಆದೇಶದಲ್ಲಿ ಸತ್ಯತೆಯನ್ನು ಅರ್ಥಮಾಡಿಕೊಳ್ಳದೇ ಇರುವುದು ನಮ್ಮ ಮೌಢ್ಯ
ು ಸಂಕೇತ.

82

ಅಪ್ರಣೋ ದ್ಯೋऽತಿಥಿಃ ಸಾಯಂ ಸೂರ್ಯೋಢೋ ಗೃಹಮೇಧಿನಾ ।
ಕಾಲೇ ಪ್ರಾಪ್ತಸ್ತ್ವ ಕಾಲೇ ವಾ ನಾಸ್ಯಾನಶ್ನನ್ ಗೃಹೇ ವಸೇತ್ ॥

—ಮನುಸ್ಮೃತಿ

ಸೂರ್ಯನು ಮುಳುಗುತ್ತಿರುವಾಗ ಬಂದ ಅತಿಥಿಯನ್ನು ಮನೆ ಲ್ಲಿಯೇ ಇರಿಸಿಕೊಳ್ಳಬೇಕು. ಊಟದ ವೇಳೆಯಲ್ಲಾಗಲೀ, ಅವೇಳೆಯಲ್ಲಾಗ ಬಂದ ಅತಿಥಿಯು ಊಟ ಮಾಡದೆ ಮಲಗಬಾರದು.

  

ಭಗವಾನೇಕ ಏವೈಷ ಸರ್ವಕ್ಷೇತ್ರೇಷ್ವವಸ್ಥಿತಃ ।
ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋ ವಾ ಕರ್ಮಭಿಃಕುತಃ ॥

—ಭಾಗವತ

ದೇವರು ಒಬ್ಬನೇ. ಅವನು ಎಲ್ಲ ಚರಾಚರ ವಸ್ತುಗಳಲ್ಲಿಯೂ ಇದ್ದಾ ಅವನಿಗೆ ದೌರ್ಭಾಗ್ಯವಾಗಲೀ ಕರ್ಮಗಳ ಕ್ಲೇಶವಾಗಲೀ ಎಲ್ಲಿಯದು ?

  

ಯತ್ರ ಭಾರ್ಯಾಗಿರೋ ವೇದಾ ಯತ್ರ ಧರ್ಮೋऽರ್ಥ ಸಾಧನಂ ।
ಯತ್ರ ಸ್ವಪ್ರತಿಭಾ ಮಾನಂ ತಸ್ಮೈಶ್ರೀ ಕಲಯೇ ನಮಃ ॥

—ಕಲಿವಿಡಂಬನ.

ಯಾವ ಕಲಿಯುಗದಲ್ಲಿ ಹೆಂಡತಿಯ ಮಾತೇ ವೇದವಾಗಿದೆಯೋ ಧರ್ಮ ಹಣವನ್ನು ಗಳಿಸುವ ಉಪಾಯವಾಗಿದೆಯೋ, ತನ್ನ ಬುದ್ಧಿಯೇ ಅಳತೆಗೋಲ ಗಿದೆಯೋ ಆ ಕಲಿಪುರುಷನಿಗೆ ನಮಸ್ಕಾರ.

# ಚಿಂತನ

—ಟಿ. ಆರ್. ಮಹಾದೇವಯ್ಯ

## ನಗೆ

ನಗೆಯೊಂದು ಮಾನಸಿಕ ವ್ಯಾಪಾರ. ಮನಸ್ಸಿನಲ್ಲಿ ಮೂಡಿದ ಭಾವಾವೇಶವು ೀಹದ ಸ್ನಾಯುಗಳ ಮೂಲಕ ಹರಿದುಬಂದು ಮುಖದಲ್ಲಿ ನಗೆಯಾಗಿ ಅರಳುತ್ತದೆ. ಗೆ ಹರ್ಷದ ಹೆಗ್ಗುರುತು, ಆನಂದದ ದ್ಯೋತಕ. ಜೀವನದ ಸಂಕಷ್ಟ ಬೇಗುದಿಗಳ ರಡುಭೂಮಿಯಲ್ಲಿ ಅನಿರೀಕ್ಷಿತವಾಗಿ ಚಿಮ್ಮುವ ಕಾರಂಜಿಯಂತೆ ಹಾಸ್ಯ ಪ್ರಸಂಗ ಳು ಒದಗುತ್ತವೆ. ಆಗ ಕಹಿಯು ಕಳೆದು ಬಾಳು ಸವಿಯಾಗುವಂತೆ ಮಾಡುವ ಪದ್ಭಾಂದವನಂತೆ ನಗೆ ಮೂಡುತ್ತದೆ. ನಗೆ ಸ್ವಚ್ಛತೆ ಹಾಗೂ ನೈರ್ಮಲ್ಯದ ಂಕೇತ. ಅದು ಮನಸ್ಸನ್ನು ಹಗುರಗೊಳಿಸುತ್ತದೆ, ನಿರ್ಮಲಗೊಳಿಸುತ್ತದೆ; ುತ್ಸಾಹವನ್ನೊದಗಿಸುತ್ತದೆ. ಅಂತೆಯೇ ನಮ್ಮ ಕವಿಗಳು ನಗೆಯನ್ನು ಬಿಳಿಯ ಣ್ಣಕ್ಕೆ ಹೋಲಿಸಿದ್ದು ಸಾರ್ಥಕ ಎನಿಸುತ್ತದೆ.

ನಗೆ ಮನುಷ್ಯನಿಗೆ ಭಗವಂತನು ಅನುಗ್ರಹಿಸಿರುವ ಒಂದು ನೈಸರ್ಗಿಕ ಸಂಪತ್ತು. ಗುವುದನ್ನು ಯಾರು ಯಾರಿಗೂ ಕಲಿಸಬೇಕಿಲ್ಲ. ಕಲಿಸುವರಿಲ್ಲದೆ ಸ್ವಾಭಾವಿಕವಾಗಿ ರುವ ವಿದ್ಯೆ ಇದು. ಇದಕ್ಕೆ ತಾರತಮ್ಯ ಭಾವನೆ ಇಲ್ಲ. ಬಡವ–ಬಲ್ಲಿದ, ಅಜ್ಞ– ಪ್ರಜ್ಞ, ಗಂಡು-ಹೆಣ್ಣು, ಆಳು–ಅರಸ, ಸಣ್ಣವ-ದೊಡ್ಡವ ಎಂಬ ಭೇದಭಾವವಿಲ್ಲ. ಗೆಯಲ್ಲಿ ಎಲ್ಲರೂ ಸಮಭಾಗಿಗಳು, ನಗೆಗೆ ಹಗೆಯಿಲ್ಲ.

ಜೀವನದ ಪಥದಲ್ಲಿ ಹಾಸ್ಯ, ವಿನೋದಗಳು ಮಸಾಲೆಯಿದ್ದಂತೆ. ನೀರಸತೆ ುನ್ನು ಹೋಗಲಾಡಿಸಿ ರುಚಿಯನ್ನು ಹೆಚ್ಚಿಸುತ್ತವೆ. ನೋವು–ನರಳಿಕೆಗಳನ್ನು, ಷ್ಟಕಾರ್ಪಣ್ಯಗಳ ತಾಪವನ್ನು ನಗೆಯ ಹೊಳೆ ತೇಲಿಸಿಕೊಂಡು ಹೋಗಿಬಿಡುತ್ತದೆ. ೀವನ ಒಡ್ಡಿದ ಸಮಸ್ಯೆಗಳಿಂದ ಗಂಟಿಕ್ಕಿಕೊಂಡ ಮುಖ ಸಡಿಲವಾಗಿ ನಗೆಮಿಂಚಿನ ೊಳಪು ಸುಳಿದಾಡುತ್ತದೆ. ಮುದುಡಿದ ಹೃದಯ ವಿಕಾಸವಾಗಿ ಸಂತೋಷದಿಂದ ಡಿಯುತ್ತದೆ; ಬಾಳಲು ಹೊಸ ಹುರುಪನ್ನು ಮೂಡಿಸುತ್ತದೆ. ಇದೇನು ಸಣ್ಣ ಪಕಾರವಲ್ಲ. ರಸದಾಯಿಯಾದ ಇಂಥ ಅಮೂಲ್ಯ ಸಾಧನ ಯಾರಿಗೆ ಬೇಡ?

ನೀವು ಎಷ್ಟೇ ಅಲಂಕಾರಮಾಡಿಕೊಂಡರೂ ಮುಖದಲ್ಲಿ ನಗೆಯೊಂದನ್ನು ಧರಿಸಿ ೊಳ್ಳದಿದ್ದರೆ ಅಲಂಕಾರ ಪೂರ್ಣವಾಗದು ಎನ್ನುತ್ತದೆ ಒಂದು ಅನುಭವವಾಣಿ:

82

"Your dress will not be completed unless you wear a smile" ಹಾಗೆಯೇ ಊಟ ಎಷ್ಟೇ ರುಚಿಕಟ್ಟಾಗಿರಲಿ, ರಸಕವಳವೇ ಇರಲಿ, ಎಷ್ಟೇ ಪ್ರೀತಿಯಿಂದ ಬಡಿಸುತ್ತಿರಲಿ, ನಾಲ್ಕು ವಿನೋದದ ಮಾತು ಇಲ್ಲದಿದ್ದರೆ ಹಿತವಾದ ಮಿತವಾದ ನಗೆ ನಂಚುವುದಕ್ಕಿಲ್ಲದಿದ್ದರೆ ಊಟದಲ್ಲಿ ಸ್ವಾರಸ್ಯವೇ ಇರುವು ದಿಲ್ಲ. ಹೀಗಾಗಿ ನಗೆ ಬಾಳಿನ ಅಪರಿಹಾರ್ಯ ಅಂಗವೆನಿಸಿದೆ.

ಉಲ್ಲಾಸಕರವಾದ ನಗು ದೈವಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಕಾರಣ ವಾಗುತ್ತದೆ. ಮನುಷ್ಯನಿಗೆ ಬೇಕಾದದ್ದು ಸ್ವಾಸ್ಥ್ಯ ಮತ್ತು ಆನಂದ, ಅದೂ ಆರೋಗ್ಯ ಕರವಾದ ಆನಂದ. ನಗುವವನು ತನ್ನ ಜೊತೆಯವರೊಡನೆ ನಕ್ಕರೆ ಅಂಥ ನಗೆಗೆ ಹೆಚ್ಚು ಮೌಲ್ಯ. ಇನ್ನೊಬ್ಬರನ್ನು ನೋಡಿ ನಗುವುದು ದೊಡ್ಡದಲ್ಲ; ಎಲ್ಲರೊಡನೆ ನಗುವುದು ದೊಡ್ಡದು. ಅದಕ್ಕೆ ಸರ್ವಜ್ಞ ನಕ್ಕು ನಗಿಸುವ ನಗೆಲೇಸು ಎಂದದ್ದು ನಗುವುದು ಬಾಳಿನ ಧರ್ಮ; ನಾವು ನಕ್ಕು ಇನ್ನೊಬ್ಬರನ್ನು ನಗಿಸುವುದು ಜೀವನದ ಮರ್ಮ ಎಂದಂತಾಯಿತು. ನಗು ಸ್ವಾರ್ಥಮೂಲವಾಗಬಾರದು, ನಕ್ಕು ತಾನು ಸಂತೋಷಿಸಿದಂತೆ ತನ್ನ ಜೊತೆಯವರನ್ನು ಸಂತೋಷಪಡಿಸಬೇಕು.

ನಗೆಯಲ್ಲಿ ವೈವಿಧ್ಯಗಳುಂಟು, ವ್ಯಕ್ತಿಯ ಅಭಿರುಚಿ, ಅವನ ಸಂಸ್ಕಾರಗಳನ್ನು ಅನುಸರಿಸಿ ಹೊಮ್ಮುತ್ತದೆ. ಒಂದು "ಸುಹಾಸ", ಅಲ್ಲಿ ಇನ್ನೊಬ್ಬರಿಗೆ ನೋವುಂಟು ಮಾಡದ ಸರಸನಗೆ ಇರುತ್ತದೆ. ಮುಗುಳ್ನಗೆ, ಮೆಲ್ನಗೆ, ತುಂಬುನಗೆ, ಅರಳುನಗೆ ನೇಹದನಗೆ ಅಲ್ಲಿ ಮೂಡುತ್ತವೆ.

ಇನ್ನೊಂದು "ಪರಿಹಾಸ", ಸಾಯೆ ಸರಸವಾಡುವ ರೀತಿ ಇದರದು. ಇಲ್ಲಿ ಯದು ಮೆಚ್ಚುನಗೆಯಲ್ಲ ಚುಚ್ಚುನಗೆ. ಕಟಕಿ, ಕುಚೇಷ್ಟೆ, ವಿಡಂಬನೆ ಇಲ್ಲಿ ಪ್ರಧಾನ ಅಣಕುನಗೆ, ಕೆಣಕುನಗೆ, ತುಂಟುನಗೆ, ಬಿರುನಗೆ, ತಿರಸ್ಕಾರನಗೆ ಇಲ್ಲಿ ಮೂಡು ತ್ತವೆ.

ಇನ್ನೊಬ್ಬರನ್ನು ನೋಡಿ ಅಪಹಾಸ್ಯಮಾಡಿ ನಗುವುದಕ್ಕಿಂತ, ತನ್ನನ್ನು ತಾನು ನೋಡಿಕೊಂಡು ಸುಹಾಸ ಹೊಮ್ಮಿಸುವುದು ಆರೋಗ್ಯಕರವಾದುದು. ಬಾಳಿನ ನೋವಿಗೆ ದಿವ್ಯಾಪಥಿಯಾಗುವ ನಗೆ ಬೇಕು. ಬಾಳಿನ ಭಾರವನ್ನು ಹಗುರವಾಗಿಸುವ ವಿನೋದ ನಮಗೆ ಬೇಕು. ನಗಿಸುತ್ತಲೇ ದೌರ್ಬಲ್ಯಗಳನ್ನು ಕಂಡುಕೊಂಡು ತಿದ್ದಿ ಕ್ಕೊಳ್ಳುವಂತೆ ಮಾಡುವ ಸೌಹಾರ್ದದ ನಗು ಎಷ್ಟಿದ್ದರೂ ಬೇಕು. ಆಂದಮೇಲೆ ನಗಲೂ ಒಂದು ಹದಬೇಕು, ಸಂಸ್ಕಾರಬೇಕು; ನಗಿಸಲು ಚಮತ್ಕಾರಬೇಕು, ರಸಿಕತೆ ಬೇಕು; ಅನುಭವಿಸುವವರಿಗೂ ಅರ್ಹತೆಬೇಕು, ಚುರುಕು ಬುದ್ಧಿಯೂಬೇಕು.

(ಮೂರನೇ ರಕ್ಷಾ ಪುಟ ನೋಡಿ)

# ಶರಣರು ಮತ್ತು ವಿಚಾರವಾದ

—ಎಂ. ಎ. ನಿಲಾಂಬಿಕಾ

"ಕಲ್ಯಾಣ ಕೈಲಾಸ ವೆಂಬ ನುಡಿ ಹಸನಾಯಿತ್ತು....ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ,ನಿಮ್ಮಶರಣರಿದ್ದ ಪುರವೇ ಕೈಲಾಸ ಪುರವಯ್ಯಾ" ಎಂಬ ಅಕ್ಕನವಾಣಿಯನ್ನ ಆಲಿಸಿದಾಗ ಮತ್ತು "ಶರಣರೊಕ್ಕುದರ ಸ ವಿ ಕೈ ಲಾ ಸದೊಳಗುಂಟೆ? ಎಂದು ಶಿವನು ಬಂದು ಕರೆದಾಗ ಕೈಲಾಸವನ್ನೇ ತಿರಸ್ಕರಿಸಿದ ಬಸವಣ್ಣನವರ ನುಡಿಯನ್ನ ಕೇಳಿದಾಗ ಕಲ್ಯಾಣ ಎಂಥ ಪುಣ್ಯ ಪ್ರದವಾದ ಕ್ಷೇತ್ರವೆನಿಸದಿರದು.

ಇಂಥಕಲ್ಯಾಣವನ್ನು ಕೈಲಾಸವನ್ನಾಗಿ ಮಾಡಿದ ಕೀರ್ತಿ ಶರಣರಿಗೆ ಸೇರಿದ್ದು. ಇವರು ಲೌಕಿಕವಲ್ಲಿದ್ದು ಅಲೌಕಿಕವನ್ನ ಮೀರಿನಿಂತವರು. ಮನೆನೊಡಾ ಬಡವರು ಧನಮನ ಸಂಪನ್ನರು. ನಿತ್ಯತೃಪ್ತರು. ಬೆಳಿಗ್ಯೆ ಕಾಯಕ ಮಾಡಿ ಸಂಜೆ ತಮ್ಮ ದಿನನಿತ್ಯದ ಅನುಬವವನ್ನ ಕಂಡುಂಡ ಸತ್ಯವನ್ನು ಅನುಭವ ಮಂಟಪದಲ್ಲಿ ಚರ್ಚೆ ನಡೆಸುತ್ತಿದ್ದರು. ತಮ್ಮ ದೈನಂದಿನ ಅನುಭವವನ್ನ ವಚನಗಳ ಮೂಲಕ ಬಿತ್ತರಿಸಿದರು. ಅವರ ಈ ವಚನಗಳಿಂದ ಅವರು ಎಂಥ ವಿಚಾರವಾದಿಗಳು, ಸಮಾಜವಾದಿಗಳು ಎಂಬುದುತಿಳಿಯುತ್ತದೆ. ಇಂದು ರಷ್ಯಾದಂಥ ಮುಂದುವರಿ ರಾಷ್ಟ್ರಗಳು ತಮ್ಮ ಸರಕಾರವನ್ನು ಯಾವುದರ ಆದಾರದಮೆಲೆ ರೂಪಿಸಿ ಕೊಂಡಿದ್ದಾರೋ ಅಥ ಸಮಾಜವನ್ನ ಅಂದೇ ಕಾಣುತ್ತೇವೆ ಎಂದರೆ ತಪ್ಪಾಗಲಾರದು- ಪ್ರಸ್ತುತಶರಣರು ಎಂಥ ವಿಚಾರವಾದಿಗಳು ಅವರವಾದ ಇಂದು ಎಷ್ಟು ಅವಶ್ಯಕ ಎಂಬುದನ್ನ ಸ್ಥೂಲವಾಗಿ ತಿಳಿಸಲೆತ್ನಿಸಿದ್ದೇನೆ.

ಶರಣರ ಕಾರ್ಯಕ್ಷೇತ್ರದ ಮೂಲನೇತಾರರೇ ಬಸವಣ್ಣನವರು. ಇವರು ಮೊದಲು ಸಮಾಜದತ್ತ ದೃಷ್ಟಿಯನ್ನ ಹರಿಸಿ ಅಲ್ಲಿತುಂಬಿತುಳುಕಾಡುತ್ತಿದ್ದ ಶ್ರೀಮಂತ ಬಡವ ಎಂಬ ವರ್ಗಬೇಧವನ್ನ, ಮತಬೇದವನ್ನ ಕಂಡು ತಮ್ಮ ತಮ್ಮ ಮನದಲ್ಲಿ ಇವುಗಳನ್ನ ಹೇಗೆನಾಶಗೊಳಿಸುವುದೆಂಬುದರ ಬಗ್ಗೆ ಚಿಂತಿಸಲಾರಂಬಿಸಿದರು. ಇದಕ್ಕೆಮುನ್ನ ಮೊದಲು ತಮ್ಮ ಧರ್ಮದಿಂದ ಹೊರ ಬಂದರು. ಅಸ್ಪೃಶ್ಯರೆನಿಸಿಕೊಂಡಿದ್ದ ಜನರಹೀನ ಗತಿಗೆ ಮರುಗಿದರು. ಪರಿಣಾಮ ಎಲ್ಲರೂ, ಒಬ್ಬದೇವನ ಮಕ್ಕಳು. ಎಂಬ ಭಾವನೆ ಬರುವಂತೆ ಮಾಡಿದರು. ಅಸ್ಪೃಶ್ಯರೆಂದು ದೇವಾಲಯಕ್ಕೆ ಸೇರಿಸದಿದ್ದ ಜನರೆಲ್ಲತಮ್ಮ ಪೂಜೆಯನ್ನ ತಾವೆ ಮಾಡಿಕೊಳ್ಳುವಂತೆ ಅರುಹಿನಕುರುಹಾದ ನಿರಾಕಾರ ಸ್ವರೂಪವಾದ ಲಿಂಗ ವನ್ನ ಧರಿಸುವಂತೆ ಮಾಡಿದರು. ಪರಿಣಾಮ ಜನರು ದೇವಾಲಯವನ್ನೇ ಬಹಿಷ್ಕರಿಸಿದರು. ಎಲ್ಲರ ದೇಹವೂ ದೇವಾಲಯ ವಾಗಿರುವುದರಿಂದ ಯಾರ ದೇಹವೂ

ಅಪವಿತ್ರವಲ್ಲ ಎಂಬ ಬಾವನೆ ಜನರಲ್ಲಿ ಮೂಡಿತು. ಜನರೆಲ್ಲಾ ಪ್ರಿತಿ ಸಹಕಾರ ದಿಂದ ಒಂದೆಡೆ ಸಂಗಮವಾದಾಗ ದೇವರನ್ನ ಅಲ್ಲಿಯೇ ಕಾಣುತ್ತೇವೆಂದು

"ಕಾಸಿ ಕಮ್ಮಾರನಾದ ಬೀಸಿಮಡಿವಾಳನಾದ
ಹಾಸನಿಕ್ಕಿ ಸಾಲಿಗನಾದ ವೇದವನ್ನೋದಿ ಹಾರುವ ನಾದ"

ಎಂದು ಸಮಾಜದಲ್ಲಿ ಎಲ್ಲರ ಉದ್ಯೋಗಗಳು ಸಮವಾದುದರಿಂದ ಎಲ್ಲರೂ ಸಮ ಎಂದು ಕಂಡುಕೊಂಡರು. ಈ ಸಮಾನಜನ, ಯಾವ ಕಾಯಕವು ಮೇಲು ಕೀಳೆಂದು ವಿಚಾರಿಸದೆ ಅವುಗಳನ್ನು ಅನುಸರಿಸುತ್ತ ಆದ್ಯಾತ್ಮಿಕ ಚಿಂತನೆ ಮಾಡುತ್ತ ಅಲ್ಲಿಯೂ ಸಲ್ಲುವಂತಾದರು.

ನಮ್ಮ ದೇಶ ಜ್ಯಾತ್ಯಾತೀತ ರಾಷ್ಟ್ರ ವಾದರೂಇಂದುರಾಜ ಕಾರಣಿಗೆ ಮತ್ತ ದೊರಕ ಬೇಕಾದರೆ, ನಿರುದ್ಯೋಗಿಗೆ ಕೆಲಸದೊರಕಬೇಕಾದರೆ. ಜಾತೀಯತೆಯೇ ಮಾಧ್ಯಮ. ಅದಿರಲಿ ಒಂದೇ ಜಾತಿಯವರೆಂದು ಹೇಳಿ ಕೊಳ್ಳುವವರಲ್ಲಿ ಅನೇಕ ಪಂಗಡಗಳಿದ್ದು ಸದಾ ಕಲಹ ದ್ವೇಷಗಳಿಂದ ಕೂಡಿರುತ್ತಾರೆ. ಇಂಥ ಪರಿಸ್ಥಿತಿ ಯಿಂದಕೂಡಿರುವ ನಮಗೆ ಶರಣರ ನುಡಿಗಡಣ ಅತ್ಯವಶ್ಯಕ. ಈದುಸ್ಥಿತಿಯನ್ನ ಹೊಗಲಾಡಿಸಲು ಪ್ರಾಚೀನ ಕಾಲದಿಂದಲೂ ಎಷ್ಟೋ ಮಹಾಪುರುಷರು ಪ್ರಯತ್ನಿಸಿದರಾದರೂ ಅದು ಇಂದಿಗೂ ಬೆಳೆಯುತ್ತಲೇ ಇದೆ. ನಿಮಗೆ ಕೆಲಸಬೇಕೆ? ಸರಿ ನಿಮ್ಮ ಜಾತಿಯಾವುದು? ಕೆಲಸ ಹುಡುಕುತ್ತಿರುವ ನಿರುದ್ಯೋಗಿ ಸಂದರ್ಶನದಲ್ಲಿ ಎದುರಿಸಬೇಕಾದ ಮೊದಲ ಪ್ರಶ್ನೆ ತಮ್ಮ ಜ್ಯಾತಿಯಲ್ಲದಿದ್ದರೆ ಯಾರಾದರು ಗಣ್ಯ ವ್ಯಕ್ತಿಗಳ ಸಹಕಾರವಿದೆಯೆ? ಎಂದುನೋಡುವುದು' ಅದೂ ಇಲ್ಲದಿದ್ದರೆ ಎಷ್ಟು ಹಣಕೊಡುವಿರಿ? ಇಂಥ ಸಮಸ್ಯೆಗಳನ್ನ ಇಂದು ನಮ್ಮ ಯುವ ಜನರು ಎದುರಿಸಬೇಕಾಗಿದೆ. ಇಂದು ನಮ್ಮಸಮಾಜದಲ್ಲಿ ಜಾತಿ ಹಣ ಯಾವುದೂ ಶಾಶ್ವತ ವಲ್ಲ. ಜೀವನಕ್ಕೆ 'ತಂಡುಲದ ಹಿ ಡಿ ಯೊ ಂ ದು ತುಂಡು ಬಟ್ಟೆ ಯೊಂದಾದರೆ, ಸಾಕೆಂಬ ಮನೋಭಾವದಿಂದ ಕೂಡಿದ ಶರಣರ ನುಡಿಗಡಣ ಅವಶ್ಯಕ ವಲ್ಲವೆ?.

ಅಂದು ಸಮಾಜದ ಪ್ರತಿಯೊಬ್ಬರೂ ಯಾವುದಾದರೊಂದು ಕಾಯಕವನ್ನು ಅನುಸರಿಸ ಬೇಕಿತ್ತು ಜನಸಂಖ್ಯೆ ಕಡಿಮೆ ಇದ್ದು ವೃತ್ತಿಗಳು ಹೆಚ್ಚಾಗಿದ್ದುದರಿಂದ ಆಜನರು ತಮಗೆ ಬೇಕಾದ ಕಸುಬುಗಳನ್ನ ಆರಿಸಿಕೊಳ್ಳುವ ಸ್ವಾತಂತ್ರ್ಯ ವಿತ್ತು. ಪ್ರತಿಯೊಬ್ಬರು ದುಡಿದು ಹಂಚಿ ಬಾಳುತ್ತಿದ್ದುದರಿಂದ ಜನರಲ್ಲಿ ಸಹಕಾರವಿತ್ತು. ಸಂಗ್ರಹಬುದ್ಧಿ ಇರಲಿಲ್ಲ. ನಾಳಿನ ಚಿಂತೆ ಮಾಡದೆ "ತಂದಿಕ್ಕುವ ಶಿವಂಗೆ ಬಚತನವೆ" ಎಂಬ ಭಾವನೆ ಹೊಂದಿದ್ದರಿಂದ ಸಮಾಜದ ಸೊತ್ತು ಎಲ್ಲರಿಗೂ ವಿನಿಯೋಗವಾಗುತ್ತಿತ್ತು.

ಇಂದು ಹೆಚ್ಚುತ್ತಿರುವ ಜನಸಂಖ್ಯೆಗನುಗುಣ ವಾಗಿ ನಿರುದ್ಯೋಗಿಗಳ ಸಂಖ್ಯೆ ಬೆಳೆಯುತ್ತಿದೆ. ಇಂದು ಎಷ್ಟು ಡಿಗ್ರಿಗಳನ್ನ ಹೊಂದಿದ್ದರೂ ನಮ್ಮ ಯುವಕರು ನಿರಾಶೆ

ದ ಕೂಲಿಗಾರರಾಗಿಯೋ ರಿಕ್ಷಾ ಚಾಲಕರಾಗಿಯೋ ಕೆಲಸ ಮಾಡಬೇಕಾಗು
ಇಂಥ ಪರಿಸ್ಥಿತಿಯಿರುವ ನಮ್ಮ ಜನರು ಶರಣರಂತೆ ನಾಳಿನ ಚಿಂತೆಮಾಡದೆ
ದಂದಿನ ನೇಮ ಅಂದಂದಿನ ಅಂಬಲಿಗೆ ಸಲ್ಲಬೇಕೆಂಬ ಮನೊಭಾವ ಹೊಂದಲು
ವೇ? ಎಂಬ ಪ್ರಶ್ನೆ ಏಳುತ್ತದೆ. ನಾಳೆಗೆಂದು ಯೋಚಿಸದಿದ್ದರೆ ಮಾರನೇದಿನ
ಸಿಗದಿದ್ದರೆ ಅಂದು ಅವರ,ಅವರನ್ನು ನಂಬಿ ದವರ ಗತಿಯೇನು? ಇದನ್ನು ಹೋ
ಡಿಸ ಬೇಕಾದರೆ ಶ್ರೀಮಂತ ವರ್ಗವು ಬಡವರ ಕಡೆ ತಮ್ಮ ಸಹಾಯಹಸ್ತ ನೀಡಿ
ಸಂಗ್ರಹ ಬುದ್ಧಿಯನ್ನ ಬಿಟ್ಟಿದ್ದೇ ಆದರೆ ಶರಣರು ಕಂಡ ಸಮಾಜವನ್ನ ಕಾಣಬ
. ಆದರೆ ಇಂದು–"ಕುದುರೆ ಸತ್ತಿಗೆಯವರ ಕಂಡರೆ ಹೊರಳಿ ಬಿದ್ದು ಕಾಲ ಹಿಡಿ
ರ" ಜನರೇ ಹೆಚ್ಚು ಬಡವರತ್ತ ಯಾರೂ ತಿರುಗಿ ನೋಡುವುದಿಲ್ಲ. ಬಡವರು
ರಾಗದೆ, ಶ್ರೀಮಂತರು ಅಹಂಕಾರದಿಂದ ಕೂಡದೆ ಜನ ನೆಮ್ಮದಿಯಿಂದಿರ
ದರೆ ಶರಣರ ನುಡಿಗಡಣ ಅವಶ್ಯಕ.

ಶರಣರ ವಿಚಾರಕ್ಕೆಸಿಲುಕಿದ ಮತ್ತೊಂದು ವಿಚಾರವೆಂದರೆ ಸ್ತ್ರೀಯರಸಮ
. ಶರಣರು ಹಿಂದೆಂದೂ ಸ್ರೀಯರಿಗೆ ದೊರಕದ ಸ್ವಾತಂತ್ರ್ಯವನ್ನು ಕೊಟ್ಟು
ಜೀವನದಲ್ಲಿ ಉಂಟಾದ ಸಮಸ್ಯೆಗಳನ್ನು ಪರಿಹಸರಿಲು ಯತ್ನಿಸಿದರು. ಸ್ತ್ರಿಯ
ಮಹಾದೇವಿಯಂತೆಕಾಣಬೆಕೆಂದರು. "ಗಂಡನುಳ್ಳಮ್ಮನ ಗೌರಿಯಂತೆ "ಕಾಣ
. ಪರಸ್ತ್ರಿಯರನ್ನು ಮಹಾದೇವಿ ಎಂಬೆ ಎಂದರು. ಆದರೆ ಅವರು ಸಮಾಜದಲ್ಲಿ
ರ ಮುಖ್ಯ ಸಮಸ್ಯೆಯಾದ ವಿಧವಾ ಸಮಸ್ಯೆಯ ಬಗ್ಗೆ ಎಲ್ಲಿಯೂ ಏನನ್ನೂ
. ಇದನ್ನ ನೋಡಿದರೆ ಅಂದು ವಿಧವೆಯರು ಇರಲಿಲ್ಲವೇ? ಎಂಬ ಪ್ರಶ್ನೆ ಏಳು
ಇಲ್ಲವೆ ಅಂದು ವಿಧವೆಯರು ಯಾವುದಾದರೊಂದು ಕಾಯಕವನ್ನು ಅನುಸರಿಸಿ
ಯಿಂದ ಇದ್ದರೆ? ಯಾವುದೂ ತಿಳಿದು ಬಂದಿಲ್ಲ. ಇಂದು ನಮ್ಮ ಸರಕಾರದ
ಮಸ್ಯೆಯ ಬಗ್ಗೆ ಅನೇಕ ರೀತಿಯಲ್ಲಿ ಪರಿಹಾರವನ್ನು ಕೈಗೊಳ್ಳುತ್ತಿದ್ದಾರೆ.

ಸಮಾಜದಲ್ಲಿ ಅಂದೂ ವೇಶ್ಯಾ ಸಮಸ್ಯೆ ಯನ್ನ ನಿರ್ಮೂಲನ ಮಾಡಲು
ತ್ನಿಸಿದ ವಿಚಾರ ನಮಗೆ ತಿಳಿದು ಬರುತ್ತದೆ. ಈಕಾಲದಲ್ಲಿ ಮುಗ್ದ ಸಂಗಯ್ಯ
ಶರಣನು ತನ್ನ ಮುಗ ಭಕ್ತಿಯಿಂದ ಲಿಂಗ ಪೂಜೆಯನ್ನು ಸೂಳೆಗಾರಿಕೆಯೆಂದು
ವೇಶ್ಯೆಯ ಮನೆಗೆಹೋಗಿ ಆಕೆಯ ಮನಃ ಪರಿವರ್ತನೆ ಮಾಡಿದ ವಿಚಾರ,
ರ ಅವರು ಕಾರ್ಯವನ್ನ ಅನುಸರಿಸಿ ಜೀವಿಸಿದ್ದರ ವಿಚಾರವು ತಿಳಿದುಬರುತ್ತದೆ.
–ಸೂಳೆ ಸಂಕವ್ವ, ಇಂದು ನಮ್ಮ ಸರಕಾದವರು ವೇಶ್ಯಾ ಸಮಸ್ಯೆ ಬಗ್ಗೆ ಪರಿ
ಕೈಗೊಳ್ಳುವ ಈ ಮಾರ್ಗವನ್ನು ಅನುಸರಿಸುವಂತ್ತಿದೆ. ಆ ವ್ಯಕ್ತಿಗಳು ಅವರ
ಲ್ಲಿ ತಿಳಿದು ಮನಃಪರಿವರ್ತನೆಗೊಂಡಾಗ ಮಾತ್ರ ಅವರ ಜೀವನ ಸಫಲವಾಗಲು
ಅದ್ದರಿಂದ ಅಂದು ಆ ಸ್ತ್ರೀಯರು ಹೇಗೆ ತಮ್ಮ ಜೀವನವನ್ನು ರೂಪಿಸಿ ಕೊಂ

ಡರುಹಾಗೆ ತಮ್ಮ ಜೀವನದಲ್ಲಿಯೂಉತ್ತಮ ಮಾರ್ಗ ಅನುಸರಿಸೋಣ ಎಂ
ಮನೋಭಾವ ಅದರಲ್ಲಿ ಮೂಡಲು ಶರಣರ ವಿಚಾರಗಳು ಅವಶ್ಯಕ.

ಇಂದು ವೈಜ್ಞಾನಿಕ ಅಂಶಗಳಿಂದ ಕಂಡುಹಿಡಿಯಲಾಗಿರುವ ಕಲ್ಲಿನಲ್ಲಿ ಕಿಚ
ಉದಕದೊಳಗಣ ಕಿಚ್ಚು-ವಿಷಯಂಗಳ ಬಗ್ಗೆ ೧೨ನೇ ಶತಮಾನದಲ್ಲಿ ಶರಣರು ಅ
ದ್ದರು. ಒಟ್ಟಿನಲ್ಲಿ ಶರಣರ ವಿಚಾರಕ್ಕೆ ನಿಲುಕದ ವಸ್ತು ವಿಲ್ಲ ಇಂದು ಅವ
ವಿಚಾರ ವಾದವನ್ನು ನಮ್ಮ ಜೀವನದಲ್ಲಿ ಅನುಸರಿಸಲು ಪ್ರಯತ್ನಿಸಿದ್ದೇ ಆದರೆನೆ
ದಿಯ ಜೀವನ ಕಾಣುವುದರಲ್ಲಿ ಸಂಶಯವಿಲ್ಲ.

## ಶ್ರದ್ಧಾಂಜಲಿ

ದಿನಾಂಕ 14-7-82 ರಂದು ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆಯಲ್ಲಿ ಶಕ್ತಿವಿಶಿಷ್ಟಾದ್ವೈತ ವೇದಾಂತ ಪ್ರಾಧ್ಯಾಪಕರಾಗಿದ್ದ ಡಿ. ಸಿದ್ಧಲಿಂಗಯ್ಯನವರು ಹೃದಯಘಾತದಿಂದ ಲಿಂಗೈಕ್ಯರಾದರೆಂದು ತಿಳಿಸಲು ವಿಷಾದಿಸುತ್ತೇವೆ. ದಿವಂಗತರು ಶ್ರೀಕ್ಷೇತ್ರ ಮತ್ತು ಪೂಜ್ಯ ಸ್ವಾಮೀಜಿಯವರಲ್ಲಿಟ್ಟಿದ್ದ ಅಪಾರ ಭಕ್ತಿ ಶ್ರದ್ಧೆಗಳು ಅಸಾಧಾರಣವಾದವುಗಳು. ಅಂತೆಯೇ ತಮ್ಮ ನೇರ ಸರಳ ಸ್ನೇಹಮಯ ಜೀವನದಿಂದ ಸಕಲ ಜನ ಪ್ರಿಯರಾಗಿದ್ದರು. ಆವರು ನಾಲ್ಕು ಶಾಸ್ತ್ರಗಳ ಪಾಂಡಿತ್ಯವನ್ನು ಗಳಿಸಿದ ದಿವಂಗತರು ಕಾಲೇಜಿನ ದೊಡ್ಡ ಆಸ್ತಿಯಾಗಿ ಅಪಾರ ಶಿಷ್ಯಜನ ಚಿತ್ತಾಪಹಾರಕರೂ ಆಗಿದ್ದರು.

ಅಪಾರ ಬಂಧು-ಬಳಗ ಮತ್ತು ಅವರ ಕುಟುಂಬ ವರ್ಗದವರಿಗೆ ಅಗಲಿಕೆಯಿಂದ ಉಂಟಾದ ದುಃಖವನ್ನು ಸಹಿಸುವ ಶಕ್ತಿಯನ್ನು ಭಗವಂತನು ಕರುಣಿಸಲೆಂದು ಪ್ರಾರ್ಥಿಸುತ್ತ, ದಿವಂಗತರ ಆತ್ಮಕ್ಕೆ ಚಿರಶಾಂತಿಯನ್ನು ಅನುಗ್ರಹಿಸಲೆಂದು "ಸಿದ್ಧಗಂಗಾ" ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಪೂವಲ್ಲಿ (ಹೂಲಿ) ಸುಕ್ಷೇತ್ರ

—ಚನ್ನಪ್ಪ ಎರೇಸೀಮೆ

ಪ್ರಾಚೀನ ಕರ್ನಾಟಕದಲ್ಲಿರುವ ಅನೇಕ ಕ್ಷೇತ್ರಗಳ ಸಮೂಹದಲ್ಲಿ ಸುಪ್ರಸಿದ್ಧ ಶೈವ ಕ್ಷೇತ್ರವೆಂದು ಕೀರ್ತಿವೆತ್ತ ಹೂಲಿ (ಪೂವಲ್ಲಿ) ಕ್ಷೇತ್ರದ ಬಗೆಗೆ ಬಹುಜನರಿಗೆ ಹೆಚ್ಚು ಪರಿಚಯವಿಲ್ಲದಿರಬಹುದು. ಶಾಸನ ಮತ್ತು ಪ್ರಾಚೀನ ಗ್ರಂಥಗಳಲ್ಲಿ ಈ ಊರನ್ನು ಪೂಲಿಗ್ರಾಮ, ಪೂಲಿಪುರ, ಪೂವಲಿಪುರ, ಪೂಲಿ ಅಗ್ರಹಾರ, ಮಹಾಗ್ರಹಾರಪೂಲಿ, ಚೂಡಾಮಣಿಪೂಲಿ-ಇತ್ಯಾದಿಯಾಗಿ ಬಣ್ಣಿಸಲಾಗಿದೆ. ಕ್ರಿ.ಶ. ೧೬೪೦ ರಲ್ಲಿದ್ದ ಕನ್ನಡದ ಸುಪ್ರಸಿದ್ಧ ಕವಿ ಸಿದ್ಧನಂಜೇಶನು ತನ್ನ ಗುರುರಾಜ ಚಾರಿತ್ರದಲ್ಲಿ (೧-೨೫)

"ಕಾಶಿಗಿಂದಂ ಮಿಗಿಲು ಕೇದಾರಕಿಂದಧಿಕ।
ಶ್ರೀಶೈಲಕಿಂಮೇಲು ಹಂಪೆಗಿಂದಂ ಹೆಚ್ಚು।
ವಾಸಿ ಗೋಕರ್ಣದ್ರಾಕ್ಷಾರಾಮಕಿಂ ಚಿದಂಬರಕಿಂತ ಘನವಾದುದು॥
ಆಸೇತು ಬಂಧಕಿಂತುನ್ನತಂ ಭೂಭಾಗ
ದಾಸಕಲ ಸಿದ್ಧಿಗಳ ಕೊಡುವ ತೀರ್ಥಂಗಳಿಗೆ
ಸಾಸಿರಕ್ಕಗಣಿತಂ ಸದ್ಗುರುಕ್ಷೇತ್ರಶ್ರೇಣಿಯಾದ ಕ್ಷೇತ್ರವೊಳವೇ॥

—ಹೀಗೆಂದು ಪೂವಲ್ಲಿಯನ್ನು ಕೊಂಡಾಡಿದ್ದಾನೆ. ಇಂದು ಈ ಊರು ಕೂಡ ಬಳ್ಳಿಗಾವಿ, ಮಳಖೇಡ, ವಿಜಯನಗರಗಳಂತೆ ಸಾಮಾನ್ಯವಾದ ಹಳ್ಳಿಗಳ ವಾತಾವರಣದ ಬೀಡಾಗಿ ಗತವೈಭವದ ಅನೇಕ ಹರಕು-ಮುರುಕು ಅವಶೇಷಗಳನ್ನು ಹೊಂದಿ ಇತಿಹಾಸಜ್ಞರ, ಸಂಶೋಧಕರ ಸಂಶೋಧನೆಗೆ ಒಳ್ಳೆಯ ಪುಷ್ಕಳ ಆಹಾರವನ್ನೊದಗಿಸುವ ಸ್ಥಾನ ವಿಶೇಷವಾಗಿದೆಯೆನ್ನಬಹುದು.

ಧಾರವಾಡದಿಂದ ಸವದತ್ತಿಗೆ ಹೋಗಿ ಅಲ್ಲಿಂದ ಈಶಾನ್ಯಕ್ಕೆ ರಾಮದುರ್ಗದ ಮಾರ್ಗವಿಡಿದು ಕೇವಲ ೫ ಮೈಲು ಬಸ್ಸಿನಲ್ಲಿ ಹೋದರೆ ಹೆದ್ದಾರಿಯ ಎಡಪಾರ್ಶ್ವದಲ್ಲಿ ಈ ಊರು ಸಿಗುವುದು. ಈ ಗ್ರಾಮವನ್ನು ಬಳಸಿ ಅಕ್ಕಪಕ್ಕದಲ್ಲಿ ಅನೇಕ ಮಹತ್ವದ ಐತಿಹಾಸಿಕ, ಧಾರ್ಮಿಕ ಸ್ಥಳಗಳುಂಟು. ಪ್ರಸಿದ್ಧ ಶಕ್ತಿ ಕ್ಷೇತ್ರವೆಂದು ಹೆಸರಾಂತ "ಏಳುಕೊಳ್ಳದ ಎಲ್ಲಮ್ಮ"ನ ಗುಡ್ಡ ದಕ್ಷಿಣ ದಿಕ್ಕಿನಲ್ಲಿ ಕೇವಲ ಮೂರು ಮೈಲುಗಳ ದೂರದಲ್ಲಿ ಕೂಗಳತೆಯ ದೂರದಲ್ಲಿದೆಯೋ ಎಂಬಂತೆ ರಾರಾಜಿಸುತ್ತಿದೆ. ಪಶ್ಚಿಮ ದಿಗ್ಭಾಗದಲ್ಲಿ ಕೆಲವೇ ಮೈಲುಗಳ ಅಂತರ ಅಗಸ್ತ್ಯ ಕ್ಷೇತ್ರವೆಂದು ಹೇಳಲಾಗುತ್ತಿರುವ ಮುನಿವಳ್ಳಿಯೂ, ಪವಿತ್ರ ಮಲಪ್ರಹರಿಣೀ (ಮಲಾಪಹಾರಿಣೀ)

ನದಿಯ ನವಿಲುತೀರ್ಥವೆಂದು ಕರೆಯಲಾಗುತ್ತಿರುವ ತೀರ್ಥವೂ, ಪ್ರಾಚೀನ ಕಾಲದ ಸೋಮೇಶ್ವರ ದೇವಾಲಯವನ್ನುಳ್ಳ ಸೊಗಲಕ್ಷೇತ್ರವೂ ಕಂಗೊಳಿಸುತ್ತವೆ. ಈಶಾನ್ಯ ದಿಕ್ಕಿನಲ್ಲಿ ಪ್ರಸಿದ್ಧ ಕಾಳಿಕಾಂಬಾ ಕ್ಷೇತ್ರವೆನಿಸಿರುವ ಶಿರಸಂಗಿಯೆಂಬ ಊರಿದೆ. ಪೂರ್ವ ದಿಕ್ಕಿನಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮ ಪ್ರಾರಂಭವಾಗುವ ಪೂರ್ವದಲ್ಲಿಯೇ ಸ್ವಾತಂತ್ರ್ಯದ ಕಹಳೆಯೂದಿ ಬ್ರಿಟಿಷರ ವಿರುದ್ಧ ಬಂಡೆದ್ದು ಅತುಲ ಪರಾಕ್ರಮವನ್ನು ಮೆರೆದ ವೀರಪುರುಷರ ಗಂಡುಮೆಟ್ಟಿನ ಚಾರಿತ್ರಿಕ ನರಗುಂದ ಪ್ರಾಂತವಿದೆ. ಇಂಥ ಐತಿಹಾಸಿಕ, ಧಾರ್ಮಿಕ, ಸಾಂಸ್ಕೃತಿಕ ಪರಿಸರದ ಮಹತ್ವಪೂರ್ಣ ಸ್ಥಳಗಳ ಮಧ್ಯ ದಲ್ಲಿರುವ ಹೂಲಿಯು 'ಸಿದ್ಧಾಚಲವೆಂದು ಕರೆಯಲಾಗುತ್ತಿರುವ ಒಂದು ಶಿಲಾಮಯ ವಾದ ಗುಡ್ಡದ ತಪ್ಪಲಿನಲ್ಲಿ ನೂರಾರು ಶಿವಾಲಯಗಳಿಂದಲೂ, ಗುರುಮಠ ಗಳಿಂದಲೂ, ಇನ್ನಿತರ ಚಿಕ್ಕಪುಟ್ಟ ನೂರಾರು ಗುಡಿಗುಂಡಾರಗಳಿಂದಲೂ ಕಂಗೊಳಿ ಸುತ್ತ ಶಿವಕ್ಷೇತ್ರ, ಲಿಂಗಕ್ಷೇತ್ರ, ಶೈವಕ್ಷೇತ್ರ–ಇತ್ಯಾದಿ ಹೆಸರುಗಳಿಂದ ಕರೆಯಿಸಿಕೊಳ್ಳು ತ್ತಿದೆ. ಈ ಊರು ಬೆಳುವಲನಾಡಿನ ಹದಿನೆಂಟು ಅಗ್ರಹಾರಗಳಲ್ಲಿ ಒಂದು ಶ್ರೇಷ್ಠ ಅಗ್ರಹಾರವೆಂದು ವರ್ಣಿತವಾಗಿದೆ.

ಹೂಲಿ ಕ್ಷೇತ್ರವು ಭಾವುಕರಾದ ಜೀವಿಗಳಿಗೆ ಪುಣ್ಯಕ್ಷೇತ್ರವಾಗಿ, ಮುಮುಕ್ಷು ಗಳಿಗೆ ಸಿದ್ಧಿಕ್ಷೇತ್ರವಾಗಿ, ಧರ್ಮಭೀರುಗಳಿಗೆ ತೀರ್ಥಕ್ಷೇತ್ರವಾಗಿದೆ ಎನ್ನಲಾಗುತ್ತಿದೆ. ಇದು ಕವೀಶ್ವರರ ಪ್ರತಿಭೆ ಕೆರಳುವ ಸೊಬಗಿನ ತಾಣವೆನಿಸಿದೆ. ಇತಿಹಾಸಜ್ಞರಿಗೆ ಇಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುವ ಕಲ್ಲುಗಳೇ ಕೂಗಿ ಕರೆದು ತಮ್ಮ ಚರಿತ್ರೆಯನ್ನುಸಿರು ತ್ತವೆ.

ಇಲ್ಲಿರುವ ಪಂಚಲಿಂಗಗಳನ್ನುಳ್ಳ ಪಂಚಲಿಂಗೇಶ್ವರ ದೇವಾಲಯವು ವೀರಶೈವ ಧರ್ಮದ ಪ್ರಸಿದ್ಧ ಪಂಚಾಚಾರ್ಯರ ಹೆಸರಿನಲ್ಲಿ ಸ್ಥಾಪಿತವಾದ ಲಿಂಗಗಳಿಂದ ಕೂಡಿದ ದೇವಾಲಯವೆಂದು ಹೇಳಲಾಗುತ್ತಿದೆ. ಬಾದಾಮಿ ಪುಲಕೇಶಿಯ ಕಾಲದಲ್ಲಿಯೇ ಪ್ರಸಿದ್ಧ ಪುಣ್ಯಕ್ಷೇತ್ರವೆಂದು ವರ್ಣಿತವಾಗಿರುವ ಈ ಊರಿನ ಚರಿತ್ರೆ ಎರಡು ಸಾವಿರ ವರ್ಷಗಳಿಗೂ ಹಿಂದಕ್ಕೆ ಹೋಗುತ್ತದೆಂದು ವಿದ್ವಾಂಸರು ತರ್ಕಿಸಿದ್ದಾರೆ.

ಪರಮೇಶ್ವರನ ಪಂಚವಿಂಶತಿಲೀಲೆ(ಇಪ್ಪತ್ತೈದುಲೀಲೆ)ಗಳಲ್ಲಿ ಒಂದಾದ ದಕ್ಷಿಣಾ ಮೂರ್ತಿಯ ಲೀಲೆಯಲ್ಲಿ ಅವನು ಹಿಮಾಲಯದಲ್ಲಿದ್ದ ಸಪ್ತರ್ಷಿಗಳ ಸತ್ವವನ್ನು ಪರೀಕ್ಷಿಸಿ, ಅವರೆಲ್ಲರಿಗೆ ಧರ್ಮಮಾರ್ಗ ಬೋಧಿಸಿ ದಕ್ಷಿಣದ ಸಹ್ಯಾದ್ರಿ ಪರ್ವತ ಪ್ರಾಂತದಲ್ಲಿ ರಾಜಿಸುವ ಸಿದ್ಧಾಚಲಕ್ಕೆ ಸಮೀಪದಲ್ಲಿರುವ ಪೂವಲ್ಲಿ ಕ್ಷೇತ್ರಕ್ಕೆ ಬಂದನಂತೆ. ಅಲ್ಲಿ ತನ್ನ ಪುತ್ರನಾದ ಕುಮಾರ ಸ್ವಾಮಿಗೆ ಆಧ್ಯಾತ್ಮಿಕ ವಿದ್ಯಾಪೀಠದ ಆಚಾರ್ಯ ಪಟ್ಟವನ್ನು ಕಟ್ಟಿ ಆ ತನ್ನ ದಕ್ಷಿಣಾಮೂರ್ತಿಲೀಲೆಯನ್ನು ಮುಗಿಸಿದನಂತೆ. ಅನಂತರ ಕುಮಾರ ಸ್ವಾಮಿಯು ವಾಮದೇವ ಮಹರ್ಷಿಗೆ ತನ್ನ ಪೀಠವನ್ನು ಕೊಟ್ಟು ಕ್ರೌಂಚ

ಸಿದ್ಧಗಂಗಾ

ಪರ್ವತಕ್ಕೆ ಹೋಗಿ ನೆಲೆಗೊಂಡನಂತೆ. ಈ ಕ್ರೌಂಚ ಪರ್ವತವೆಂದರೆ ಈಗಿನ ಸೊಂಡೂರು ಪಕ್ಕದಲ್ಲಿ ಕುಮಾರ ಸ್ವಾಮಿಯ ಬೆಟ್ಟವೇ ಆಗಿದೆ. ಇಂದಿಗೂ ಈ ಬೆಟ್ಟದಲ್ಲಿ ಪ್ರಸಿದ್ಧವಾದ ಕುಮಾರ ಸ್ವಾಮಿಯ ದೇವಾಲಯವಿದ್ದು ಅದು ಅತ್ಯಂತ ಮಹತ್ವದ ಸ್ಥಾನವೆಂದು ಹೇಳಲಾಗುತ್ತಿದೆ. ಹೀಗೆ ಅನೇಕ ಪೌರಾಣಿಕ ಕಥೆಗಳ ಸಂಬಂಧವನ್ನು ಹೂಲಿಯ ಚರಿತ್ರೆಗೆ ಅನ್ವಯಿಸಿ ಹೇಳಲಾಗುತ್ತಿದೆ.

## ಶಾಸನಗಳಲ್ಲಿ ಹೂಲಿಯ ವರ್ಣನೆ :

ಅನೇಕ ಪ್ರಾಚೀನ ಶಾಸನಗಳಲ್ಲಿ ಹೂಲಿಯ ವರ್ಣನೆ ಬರುತ್ತದೆ. ಕ್ರಿ.ಶ. ಸು. ೧೧೭೪ ರ ಒಂದು ಶಾಸನದಲ್ಲಿ ಬೆಳುವಲನಾಡು ಭೂಮಿಯೆಂಬ ಸುಂದರ ಲಲನೆಯ ಮುಖದಂತಿದ್ದರೆ, ಶೋಭೆಗೆ ಆಗರವೆನಿಸಿದ ಹೂಲಿ ಆ ಮುಖಕ್ಕೆ ತಿಲಕವಿಟ್ಟಹಾಗಿದೆ ಎಂದು ವರ್ಣಿಸಲ್ಪಟ್ಟಿದೆ. ಇನ್ನೊಂದು ಶಾಸನದಲ್ಲಿ ಹೂಲಿಯು ಅರಳಿದ ಕಮಲಗಳ ಸಮೂಹ, ಮಲ್ಲಿಗೆ ಹೂದೋಟಗಳ ಪರಿಮಳ, ಕೆರೆಬಾವಿಗಳ ಶೋಭೆ, ದೇದಿಪ್ಯಮಾನರಾದ ಸಾವಿರಾರು ಶಿವಭಕ್ತರು–ಇವರುಗಳಿಂದ ರಾರಾಜಿಸುತ್ತಿತ್ತಂತೆ. ಮಗುದೊಂದು ಶಾಸನದಲ್ಲಿ—

"ವನಧಿಪರೀತ ಭೂತಳ ವಿಳಾಸವತೀ ಮುಖದಂತೆ ತೋರ್ಪಜಿ ।
ಲ್ವಿನಕಣಿ ಬೆಳ್ವೊಲಕ್ಕೆ ತಿಲಕಾಕೃತಿಯಿಂದೆಸೆದಿರ್ಪ ಪೂಲಿಯೋ !
ಸನಿಮಿಷರಾಜನಿರ್ಪಪುರವೋ ಫಣಿರಾಜನ ರಾಜಧಾನಿಯೋ ।
ಮನುಜನಿವಾಸಮಲ್ಲದೆನಿಸಲ್ ನೆರೆಗುಂ ಪೆರತೊಂದು ಶೋಭೆಯಿಂ" ॥

—ಹೀಗೆ ವರ್ಣಿತವಾಗಿದೆ.

ಈ ಪಟ್ಟಣವು ಪ್ರಾಚೀನ ಕಾಲದಲ್ಲಿ ಶಿವೆಯಗೇರಿ, ಕಳಶವಳ್ಳಿಗೇರಿ, ರವಿಯಣ್ಗೇರಿ, ಫೈಸಾಸಗೇರಿ, ಕೊಣಳಗೇರಿ, ಕತ್ತಿಯಗೇರಿ, ಯೇರಂದಗೇರಿ, ಕೊಕ್ಕುಳಗೇರಿಯೇ ಮೊದಲಾದ ಹತ್ತು ಕೇರಿಗಳಿಂದ ಕೂಡಿತ್ತೆಂದು ಶಾಸನವೊಂದರಲ್ಲಿ ವರ್ಣಿತವಾಗಿದೆ. ಇಂಥ ಕೇರಿಗಳಿಂದ ಕೂಡಿದ ಆ ಊರು ವೇದಗಳ ತಾಯ್ಮನೆ, ತರ್ಕದ ಬೀಡು, ಶಾಸ್ತ್ರಗಳ ಗಣಿ, ದಕ್ಷಿಣವಾರಣಾಸಿಯೆನಿಸಿದ್ದಾಗಿತ್ತೆಂದು ವರ್ಣಿಸುವ ಶಾಸನವು ಊರ ವಿದ್ವಾಂಸರನ್ನು, ಊರಿನ ಮಹತ್ವವನ್ನು ಮನವಾರೆ ವರ್ಣಿಸುತ್ತವೆ. 'ಸಾಸಿರ್ವರು ಮಹಾಜನ'ಗಳಿಂದ ಕೂಡಿದ್ದ ಈ ಊರಿನ ಮಹಾಜನರುಗಳ ವರ್ಣನೆಯನ್ನು ಒಂದು ಶಾಸನವು ಅತ್ಯುತ್ತಮವಾಗಿ ಬಣ್ಣಿಸುತ್ತದೆ. ಈ ಊರಿನಲ್ಲಿರುವ ವೀರಭದ್ರೇಶ್ವರ ದೇವಾಲಯದ ಪಕ್ಕದಲ್ಲಿರುವ ಒಂದು ಶಾಸನದಲ್ಲಿ–'ಯಜನ ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಷಟ್ಕರ್ಮನಿರತರೂ, ಶ್ರೀಮತ್ ಚಾಲುಕ್ಯ ಚಕ್ರವರ್ತಿ ಬ್ರಹ್ಮಪುರಿಸ್ಥಾನ ಪಿತೃಪಿತಾಮಹಮಹಿಮಾಸ್ಪದರೂ ರಕ್ಷಣಾರ್ಥ

ಕೋವಿದರೂ...ಆದ ಶ್ರೀಮನ್ಮಹಾಗ್ರಹಾರ ಪೂಲಿಯೂರಿನ ಒಡೆಯ ಪ್ರಮುಖರೆನಿಸ ಸಾಸಿರ್ವರ ವರ್ಣನೆ ಅತ್ಯಂತ ಮಹತ್ವದ್ದಾಗಿ ತೋರಿಬರುತ್ತಿದೆ. ಇಷ್ಟೆಲ್ಲ ಸಾಕ್ಷ್ಯಾಧಾರಗಳನ್ನು ನೋಡಿದರೆ ಪೂಲಿಯು ಚಾಲುಕ್ಯ ಚಕ್ರವರ್ತಿಗಳ ಕಾಲದಲ್ಲಿ ವೈಭವ ಶಿಖರವನ್ನೇರಿದ ಒಂದು ಧಾರ್ಮಿಕ ಮಹಾಕ್ಷೇತ್ರವಾಗಿ, ಕಂಗೊಳಿಸುತ್ತಿತ್ತೆಂದು ಹೇಳುವಲ್ಲಿ ಯಾವ ಅನುಮಾನವಿಲ್ಲ. ಈ ಸಾಸಿರ್ವರು ಮಹಾಜನಗಳು ಇಲ್ಲಿ ಏಳು ಸಲ ಸೋಮಯಾಗ ಮಾಡಿ ಯಾಗಾಂತ್ಯದ ಅವಭೃತ ಸ್ನಾನದಿಂದ ಪವಿತ್ರ ಶರೀರಿಗಳಾಗಿದ್ದರೆಂದು ತಿಳಿದುಬರುವುದು.

ಐತಿಹಾಸಿಕವಾದ ಅನೇಕ ಮಹತ್ವದ ಅಂಶಗಳನ್ನು ತಿಳಿಸುವ ಅನೇಕ ಶಾಸನಗಳೂ ಇಲ್ಲುಂಟು. ಕ್ರಿ.ಶ.ಸು. ೧೧೮೮ರಲ್ಲಿ ಕೆತ್ತಲ್ಪಟ್ಟ ಒಂದು ಶಾಸನದಲ್ಲಿ ಹೂಲಿಯ ಊರೊಡೆಯನಾದ 'ಮಂಗಳಾರ್ಣವ'ನೆಂಬ ಚಾಲುಕ್ಯ ವಂಶೀಯನು ತಾನು ಚೋಳ, ಮಾಳವ, ಗುರ್ಜರೊಡನೆ ಯುದ್ಧ ಮಾಡಿ ಜಯವನ್ನು ಪಡೆದಾಗ ತಾನು ಸ್ವತಃ ದಾನವನ್ನಿತ್ತ ಸ್ಥಳದಲ್ಲಿ ಒಂದು ಬ್ರಹ್ಮಪುರಿಯನ್ನು ಸ್ಥಾಪಿಸಿ, ಅಲ್ಲಿ ಒಂದು ಸಾವಿರ ಜನ ಬ್ರಾಹ್ಮಣರನ್ನು ನೆಲೆಗೊಳಿಸಿದನೆಂದು ಹೇಳಲಾಗಿದೆ. ಆ ಮಹಾ ಜನರಿಗೆ ಧ್ವಜ (ಗುಡಿ), ಚಾಮರ, ಒಜ್ಜರ, ಬೆಳ್ಗೊಡೆ, ಹಡಪ, ಫಳಿಗೆ, ಉಭಯಶಂಖ ಮೊದಲಾದುವನ್ನು ಕೊಟ್ಟು ಗೌರವ ಸೂಚಿಸಿದನಂತೆ.

## ಕಾಳಾಮುಖ ಶೈವರ ಕ್ಷೇತ್ರ :

ಶೈವ ಪಂಗಡಗಳಲ್ಲಿ ಒಂದಾದ ಕಾಳಾಮುಖಾಚಾರ್ಯರಿಗೂ ಈ ಊರು ನೆಲೆಯಾಗಿದ್ದಿತೆಂದು ತಿಳಿದುಬರುವುದು. ಇಲ್ಲಿನ ಅಂಧಕೇಶ್ವರ ದೇವಾಲಯದ ಬಳಿಯಿರುವ ಒಂದು ಚಿಕ್ಕ ದೇವಾಲಯದ ಹತ್ತಿರವಿರುವ ಶಾಸನವು—ಹೂಲಿಯ ದೇವರು ಅವರ ಶಿ ಷ್ಯ ಲ ಕು ಳೀ ಶ ದೇವರು–ಶಿಷ್ಯವಾಖ್ಯಾಣಿದೇವ–ಶಿಷ್ಯವಿದ್ಯೇಶಾನ ಯೋಗೀಂದ್ರ–ಶಿಷ್ಯಸೋಮದೇವ–ಶಿಷ್ಯಜ್ಞಾನಶಕ್ತಿ—ಹೀಗೆ ಲಕುಳೀಶ ಪಂಗಡದವರ ಒಂದು ಗುರು ಪರಂಪರೆ ಹೇಳುತ್ತದೆ, ಕೊನೆಯವನಾದ ಜ್ಞಾನಶಕ್ತಿ ಮುನಿಯು ತರ್ಕ ವ್ಯಾಕರಣಾದಿ ಶಾಸ್ತ್ರ ಪಾರಂಗತನಾಗಿ ಶ್ರೇಷ್ಠ ಪಂಡಿತನೆಂದು ವರ್ಣಿಸಲ್ಪಟ್ಟಿದ್ದಾನೆ. ಇವನನ್ನು ಪ್ರಣವ ರೂಪನೆಂದೇ ಕರೆಯುತ್ತಿದ್ದರಂತೆ. ಚಾಲುಕ್ಯರ ೨ನೇ ಸೋಮೇಶ್ವರನಿಂದ ಈ ಪಂಡಿತನು ಅಂಧಾಸುರ ದೇವಾಲಯವನ್ನು ಕಟ್ಟಿಸಿದನಂತೆ —ಈ ಎಲ್ಲ ವಿಷಯಗಳನ್ನು ವಿಚಾರಮಾಡಿದರೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಹೂಲಿಯಲ್ಲಿ ಕಾಳಾಮುಖಾಚಾರ್ಯರ ಪ್ರಭಾವವೂ ವಿಶೇಷವಾಗಿತ್ತೆಂದು ಹೇಳಬಹುದಾಗಿದೆ. ಹೀಗೆ ಹೂಲಿ ಪಟ್ಟಣವು ವೇದಧರ್ಮಾನುಯಾಯಿಗಳು, ವೀರಶೈವರು, ಕಾಳಾಮುಖಾಚಾರ್ಯರೇ ಮೊದಲಾದ ವಿವಿಧ-ಪಂಥಗಳ ವಿದ್ವಾಂಸರಿಂದಲೂ ಕಿಕ್ಕಿರಿದು ತುಂಬಿದ ಮಹಾನಗರವಾಗಿ ೧೨ನೇ ಶತಮಾನದಲ್ಲಿಯೇ ಕಾಣಿಸಿಕೊಂಡಿದೆ. ಇಲ್ಲಿ

ಜೈನ ಮತ್ತು ಬೌದ್ಧ ಧರ್ಮದವರೂ ಇದ್ದುದು ಇನ್ನೂ ವಿಶೇಷವಾದ ಅಂಶವೇ ಆಗಿದೆ.

### ಇಲ್ಲಿನ ಪ್ರಮುಖ ದೇವಾಲಯಗಳು :

ಹೂಲಿ ಮತ್ತು ಅದರ ಸುತ್ತಮುತ್ತಣ ಪಾಸರದಲ್ಲಿ ವಿವಿಧವಾದ ನೂರಾರು ದೇವಾಲಯಗಳಿದ್ದುದು ಹಳೆಯ ಉಳಿಕೆಗಳಿಂದ ಗೊತ್ತಾಗುತ್ತಿದ್ದರೂ, ಈಗ ವೈದಿಕ, ಶೈವ, ವೀರಶೈವ, ಜೈನಧರ್ಮಿಯರಿಗೆ ಸಂಬಂಧಿಸಿದ ಕೆಲವೇ ದೇವಾಲಯಗಳು ಉಳಿದುಕೊಂಡಿರುತ್ತವೆ. ಅವುಗಳಲ್ಲಿ ಅಗಸ್ತ್ಯೇಶ್ವರ, ಅಂಧಕೇಶ್ವರ, ಪಂಚಲಿಂಗೇಶ್ವರ, ಭೀಮೇಶ್ವರ, ಕೆರೆಯ ಸಿದ್ಧೇಶ್ವರ ಮೊದಲಾದ ದೇವಾಲಯಗಳು ಕಲೆ ಮತ್ತು ಪ್ರಾಚೀನತೆಯ ದೃಷ್ಟಿಯಿಂದ ಹೆಸರಿಸತಕ್ಕವಾಗಿವೆ. ಇವಲ್ಲದೆ ದಕ್ಷಿಣಾಮೂರ್ತಿ, ಕಲ್ಮೇಶ್ವರ, ವಿಶ್ವನಾಥ, ರಾಮನಾಥ, ರುದ್ರಪಾದ, ವೀರ ಹನುಮ, ಬನಶಂಕರಿ, ಗಣಪತಿ, ತಾರಕೇಶ್ವರ, ಚಿದಂಬರೇಶ್ವರ, ಬ್ರಹ್ಮಲಿಂಗ, ವೀರಭದ್ರ, ಬೋಳಿಬಸವೇಶ್ವರ, ಪರ್ವತ ಲಿಂಗೇಶ್ವರ, ಮಲ್ಲಿಕಾರ್ಜುನ, ಅಡಕೇಶ್ವರ, ತ್ರಿಮುಖ ಲಿಂಗ ಮೊದಲಾದ ದೇವಾಲಯಗಳು ಚಿಕ್ಕವಾಗಿವೆ. ಇಲ್ಲಿರುವ ಶಿವಾಲಯಗಳ ಬಾಹುಳ್ಯದಿಂದ ಈ ನಗರವು ಮುಖ್ಯವಾಗಿ ಶೈವ ವೀರಶೈವರ ಪ್ರಬಲ ಕ್ಷೇತ್ರವೆಂದು ಹೇಳಬಹುದಾಗಿದೆ. ಈಗಲೂ ಇಲ್ಲಿರುವ ವೀರಶೈವ ಮಠವಾದ 'ಪಂಚವಣ್ಣಿಗೆ ಬೃಹನ್ಮಠವು' ಭವ್ಯವಾದ ಐತಿಹಾಸಿಕ ಘಟನೆಗಳಿಂದ ಕೂಡಿದ ದೊಡ್ಡ ಮಠವಾಗಿದೆ. ಇಲ್ಲಿ ಇನ್ನೊಂದು 'ಶಿವಯೋಗಾಶ್ರಮ ಮಠ' ಎಂಬ ಮಠವೂ ಇದೆ.

### ಇಲ್ಲಿನ ಗುಡಿಗಳು ಮತ್ತು ಮಠಗಳ ಸಂಕ್ಷೇಪ ಪರಿಚಯ :

1) **ಅಗಸ್ತ್ಯೇಶ್ವರ ದೇವಾಲಯ :** ಇದು ಉಸುಕು ಕಲ್ಲುಗಳನ್ನು ಕೆತ್ತಿ, ನಿರ್ಮಿಸಿದ ದ್ರಾವಿಡ ವಾಸ್ತು ಶಿಲ್ಪದ ಮಾದರಿಯ ಗುಡಿಯಾಗಿದೆ. ಮುಖ ಮಂಟಪ ಗರ್ಭ ಗುಡಿಗಳಿದ್ದು ಶಿವಲಿಂಗವು ಪ್ರತಿಷ್ಠಾಪಿಸಲ್ಪಟ್ಟಿದೆ. ಲಿಂಗಕ್ಕೆ ಅಗಸ್ತ್ಯೇಶ್ವರ ಎಂದು ಹೆಸರಿಸಿದ್ದಾರೆ. ಗೋಡೆಯಲ್ಲಿ ಕ್ರಿ. ಶ. ೧೧೬೨ ರಲ್ಲಿ ಕೆತ್ತಿಸಿದ ಕಲಚೂರ್ಯ ಬಿಜ್ಜಳನ ಕಾಲದ ಒಂದು ದಾನ ಶಾಸನವಿದೆ.

2) **ಪಂಚಲಿಂಗೇಶ್ವರ :** ಈ ಪೂರ್ವದಲ್ಲಿ ಹೇಳಿದಂತೆ ಇದು ವೀರಶೈವರ ಐವರು ಪೀಠಾಚಾರ್ಯರ ಹೆಸರಿನಲ್ಲಿ ಐದು ಲಿಂಗಗಳು ಸ್ಥಾಪಿತವಾದ ಹಾಗೆ ಹೇಳಲಾಗುತ್ತಿದೆ. ಈ ಗುಡಿಯ ಐತಿಹಾಸಿಕತೆಯ ಬಗೆಗೆ ಅನೇಕವಾದ ವಿವಾದಗಳಿವೆ. ಮೊದಲು ಈ ಗುಡಿ ಜೈನರದಾಗಿತ್ತೆಂದು ಹೇಳುವವರೂ ಇದ್ದಾರೆ. ಪೂರ್ವದಿಙ್ಮುಖವಾಗಿರುವ ಈ ಗುಡಿಯನ್ನು ಕಟ್ಟಿಸಿದ ಕಾಲ ಕ್ರಿ.ಶ. ೧೧೦೦ ಎಂದು ತಿಳಿದುಬರುತ್ತದೆ. ಕಾಲ ಕಾಲಕ್ಕೆ ಬೆಳೆದುಬಂದ ಈ ಗುಡಿಯು ಕ್ರಿ. ಶ. ೧೧೦೦ ರಲ್ಲೇ ನಿರ್ಮಾಣವಾಗಿರಲಾರದೆಂದೂ, ಅದಕ್ಕೂ ಪೂರ್ವದಲ್ಲಿ ಎಂದೋ ಇದು ನಿರ್ಮಾಣವಾದುದೆಂದೂ ತರ್ಕಿಸ

ಲಾಗುತ್ತಿದೆ. ಈ ಗುಡಿಗೆ ಚಾಲುಕ್ಯ ಮಾದರಿಯ ವಿಮಾನವಿದ್ದು ಐದು ಗರ್ಭಗುಡಿಗಳಿಂದ ಕೂಡಿದ ಇದು ಸಾಕಷ್ಟು ದೊಡ್ಡದು ಮತ್ತು ಮಹತ್ವದ್ದು.

3) **ಮದನೇಶ್ವರ (ಅಂಧಕೇಶ್ವರ) ದೇವಾಲಯ :** ಹೂಲಿಯ ಉತ್ತರ ಭಾಗದಲ್ಲಿರುವ ಈ ದೇವಾಲಯಕ್ಕೆ ಕಾಳಾಮುಖಾಚಾರ್ಯರು ಸ್ಥಾನಪತಿಗಳಾಗಿದ್ದರೆಂದು ದೇವಾಲಯದ ಒಂದು ಶಾಸನದಿಂದ ತಿಳಿದುಬರುವುದು. ಈ ಶಾಸನದಲ್ಲಿ ದಂಡನಾಯಕ ಲಕ್ಕರಸ, ಜ್ಞಾನಶಕ್ತಿ, ಭುವನೈಕಮಲ್ಲ. (ಚಾಲುಕ್ಯರ 2ನೇ ಸೋಮೇಶ್ವರ) ಚಾಲುಕ್ಯ ಮಂಗಳಾರ್ಣವ ಮೊದಲಾದವರ ಹೆಸರುಗಳು ಉಕ್ತವಾಗಿವೆ. ಸಾಕಷ್ಟು ಹಳೆಯದಾದ ಈ ದೇವಾಲಯ ಹೂಲಿಯ ಪ್ರಾಚೀನ ಚರಿತ್ರೆಗೆ ಸಹಕಾರಿಯಾಗಿ ಉಳಿದುನಿಂತಿದೆ.

4) **ಭೀಮೇಶ್ವರ ದೇವಾಲಯ :** ದ್ರಾವಿಡ ವಾಸ್ತುಕ್ರಮವನ್ನನುಸರಿಸಿ ಕಟ್ಟಲ್ಪಟ್ಟ ಈ ದೇವಾಲಯ ಹೂಲಿಯ ಉತ್ತರದಿಕ್ಕಿನಲ್ಲಿ ಒಂದು ಹೊಲದಲ್ಲಿದೆ. ಜ್ಞಾನಶಕ್ತಿ ಪಂಡಿತನ ಅಪ್ಪಣೆ ಮೇರೆಗೆ ಅವನ ಶಿಷ್ಯನಾದ ಮಾರ್ತಾಂಡನೆಂಬುವನು ಒಂದು ಮಕರತೋರಣವನ್ನು ಮಾಡಿಸಿ ಗರ್ಭಗುಡಿಯ ಚೌಕಟ್ಟಿನ ಮೇಲೆ ಕೂಡಿಸಿದ ಹಾಗೆ ಅಲ್ಲಿರುವ ಬರವಣಿಗೆಗಳಿಂದ ತಿಳಿದುಬರುವುದು. ಇದೂ ಕೂಡ ಕಾಳಾಮುಖಾಚಾರ್ಯರ ಒಂದು ಸ್ಥಾನವೇ ಆಗಿತ್ತೆಂಬುದು ಮಹತ್ವದ ಅಂಶ.

5) **ಕೆರೆಸಿದ್ಧೇಶ್ವರ ದೇವಾಲಯ :** ಉಸುಕು ಕಲ್ಲುಗಳನ್ನು ಕೆತ್ತಿ, ದ್ರಾವಿಡ ಶೈಲಿ ಕಟ್ಟಲ್ಪಟ್ಟ ಈ ಗುಡಿ ಕೆರೆಯ ಮೇಲ್ಭಾಗದಲ್ಲಿರುವುದರಿಂದ ಕೆರೆ ಸಿದ್ದಪ್ಪನ ಗುಡಿ ಎಂದು ಇದನ್ನು ಕರೆಯಲಾಗುತ್ತಿದೆ. ಗುಡಿಯ ಗರ್ಭಗೃಹ ಮತ್ತು ಮಂಟಪಗಳು ಮಾತ್ರ ಉಳಿದು ಇತರ ಭಾಗ ಹಾಳಾಗಿದೆ. ಇಲ್ಲಿರುವ ಕಿ.ಶ. ೧೧೧೦೭ರಲ್ಲಿ ಕೆತ್ತಲ್ಪಟ್ಟ ಒಂದು ಶಾಸನದಲ್ಲಿ ಹೂಲಿಯ ಕಳಸವುಳ್ಳ ಕೇರಿಯಲ್ಲಿ ಜ್ಞಾನ ನಿಧಿಯೂ, ಮಾನ ನಿಧಿಯೂ ಆದ ಸಿದ್ಧೇಶ್ವರಾಚಾರ್ಯ ಇದ್ದನು. ಈತನಿಗೆ ಕಳಶೇಶ್ವರದೇವ ಎಂಬ ಶಿಷ್ಯನಿದ್ದ ಮತ್ತು ಸೋಮೇಶ್ವರ ಶಕ್ತಿಯೆಂಬ ಭಕ್ತನಿದ್ದ. ಈ ಕಳಶೇಶ್ವರ ದೇವನಿಗೆ ದತ್ತಿಯನ್ನು ಕಲ್ಯಾಣದ ಪ್ರಭುಗಳು ಕೊಟ್ಟಹಾಗೆ ಉಕ್ತವಾಗಿದೆ. ಇನ್ನು ಒಂದೆರಡು ಶಾಸನಗಳು ಇಲ್ಲಿವೆ. ಇದು ಶೈವಾಚಾರ್ಯರ ಸ್ಥಾನಾಧಿಪತ್ಯದ ದೇವಾಲಯವೇ ಆಗಿದೆ.

6) **ಪಂಚವಣ್ಣಿಗೆ ಬೃಹನ್ಮಠ :** ಸಾಕಷ್ಟು ಪ್ರಾಚೀನವಾದ ಈ ವೀರಶೈವ ಮಠ ಹಿಂದಿನಿಂದಲೂ ಅನೇಕ ವಿದ್ವಾಂಸರನ್ನು, ಕವಿಗಳನ್ನು ಹೊಂದಿರುವಂತಹದು. ಈ ಮಠದ ಪಟ್ಟವಲ್ಲರಿಯನ್ನು ಅವಲೋಕಿಸಿದವರಿಗೆ ಶಾ. ಶಕ ೩೫ ನೆಯ ಸಂವತ್ಸರಕ್ಕಿಂತಲೂ ಹಿಂದೆ ಐದು ಜನ ಆಚಾರ್ಯ ಪರಂಪರೆಯ ಹೆಸರುಗಳು ಕಾಣಸಿಗುತ್ತವೆ. ಇಲ್ಲಿರುವ ಗುರುವರ್ಗದವರ–ಸಿದ್ಧಚೈತನ್ಯ, ಜ್ಞಾನಶಕ್ತಿ, ಲಕುಲೀಶ–ಇತ್ಯಾದಿ ಹೆಸರುಗಳಿಂದ ಇದು ಪ್ರಾಚೀನ ಕಾಲದಲ್ಲಿ ಕಾಳಾಮುಖಾಚಾರ್ಯರ ವಿದ್ಯಾ ಕೇಂದ್ರವೇ ಆಗಿದ್ದು ಮುಂದೆ ವೀರಶೈವ ಕ್ಷೇತ್ರವಾಗಿ ಯಾವುದೋ ಗುರುಗಳ ಕಾಲಕ್ಕೆ ಪರಿವರ್ತನೆ

ಸಿದ್ಧಗಂಗಾ

ಗೊಂಡಿರಬಹುದು. ಈ ಮಠಕ್ಕೆ ಸಂಬಂಧಿಸಿದ ಅನೇಕ ಶಾಸನಗಳಲ್ಲಿ ಇದರ ಘನತೆ ಕೊಂಡಾಡಲ್ಪಟ್ಟಿದೆ. ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರಗಳೆಂಬ ಎರಡು ಕನ್ನಡ ಕೃತಿಗಳನ್ನು ಕನ್ನಡ ಸಾರಸ್ವತ ಪ್ರಪಂಚಕ್ಕರ್ಪಿಸಿದ ಸಿದ್ಧನಂಜೇಶ (ಕ್ರಿ.ಶ. ೧೬೫೦)ನೆಂಬ ಕವಿ ಈ ಮಠದ ಗುರುಪರಂಪರೆಯಲ್ಲಿ ಬಂದ ವೀರಶೈವ ಕವಿಯಾಗಿದ್ದಾನೆ. ಆದ್ಯ ಪೀಠಾಚಾರ್ಯರ ಪರಂಪರೆ ಹೀಗೆ :—

ಶ್ರೀ ದಕ್ಷಿಣಾಮೂರ್ತಿ–ಕುಮಾರ ಸ್ವಾಮಿ–ಶ್ರೀ ವಾಮದೇವ ಮಹರ್ಷಿ–ದೂರ್ವಾಸ ಮಹರ್ಷಿ–ಶ್ರೀಕಂಠ ಸ್ವಾಮಿ–ಶ್ವೇತಾಶ್ವತರ ಮಹರ್ಷಿ–ಕೈವಲ್ಯ ಮಹರ್ಷಿ–ಸರ್ವೇಶ್ವರ ಮಹರ್ಷಿ–ವಿಶ್ವೇಶ್ವರ ಮಹರ್ಷಿ–ವಿಶ್ವ ಮುನೀಶ್ವರರು–ಇತ್ಯಾದಿ ಇವರೆಲ್ಲ ಷಟ್‌ಸ್ಥಲ ಬ್ರಹ್ಮಿಗಳಾಗಿ ಕೃಷ್ಣ ಯಜುರ್ವೇದಾಂತ ಶಾಖಾ ಪ್ರವರ್ತಕರಾಗಿದ್ದಂತೆ ಹೇಳಲಾಗಿದೆ. ದಕ್ಷಿಣ ಭಾರತದಲ್ಲಿ ಇವರೇ ಈ ಶಾಖಾ ಸಂಪ್ರದಾಯವನ್ನು ತಂದವರೆಂದು ತಿಳಿದುಬರುವುದು. ಸಾಕಷ್ಟು ಜಿಜ್ಞಾಸೆಗಳಿಂದ ಕೂಡಿದ ಈ ಮಠವು ಪ್ರಾಚೀನತೆಯ ದೃಷ್ಟಿಯಿಂದಲೂ, ಇನ್ನಿತರ ಕಾರಣಗಳಿಂದಲೂ ಮಹತ್ವದ ಸ್ಥಾನವಾಗಿದೆಯೆನ್ನಬಹುದು. ಇಂದಿಗೂ ತನ್ನ ಗುರುಪರಂಪರೆಯನ್ನು ಈ ಮಠ ಉಳಿಸಿಕೊಂಡು ಬಂದಿರುವುದೊಂದು ಗಮನಾರ್ಹವಾದ ಅಂಶವಾಗಿದೆ.

ಇವಲ್ಲದೆ ಹೂಲಿಯಲ್ಲಿನ ವೀರಭದ್ರೇಶ್ವರ ದೇವಾಲಯ, ವಿರಕ್ತಮಠ, ಅನೇಕ ವೀರಗಲ್ಲುಗಳು ಸಂದರ್ಶನ ಯೋಗ್ಯವಾಗಿ ಕುತೂಹಲವನ್ನು ಕೆರಳಿಸುವ ಅಂಶಗಳಾಗಿವೆ. ಹೂಲಿಯ ಸುತ್ತಮುತ್ತೆಲ್ಲ ನೋಟಕರಿಗೆ ಅನೇಕ ಅಳಿದುಳಿದ ಅವಶೇಷಗಳು ಕಾಣಸಿಗುತ್ತವೆ. ಅದುದರಿಂದ ಈ ಕ್ಷೇತ್ರವು ಕರ್ನಾಟಕದ ಸುಪ್ರಸಿದ್ಧ ಸಾಂಸ್ಕೃತಿಕ ಸ್ಥಾನವಾಗಿ, ಧಾರ್ಮಿಕ ಸಂಸ್ಕೃತಿ ಸಂವರ್ಧನತಾಣವಾಗಿ ಮೆರೆದು ಕನ್ನಡನಾಡಿನ ಇತಿಹಾಸದ ಮೇಲೆ ಬೆಳಕು ಚೆಲ್ಲಬಲ್ಲ ಅನೇಕ ಅಂಶಗಳಿಂದ ತುಂಬಿನಿಂತಿದೆ ಎನ್ನಬಹುದು. ಇದನ್ನು ಸಂದರ್ಶಿಸಿದ ಡಾ|| ಜೇಮ್ಸ್ ಬರ್ಜೇಸ್ ಎಂಬ ವಿದ್ವಾಂಸನು 'ಹೂಲಿಯ ಸುತ್ತಮುತ್ತ ಬಿದ್ದಿರುವ ಪಳೆಯುಳಿಕೆಗಳನ್ನು ನೋಡಿವರೆ ಈ ಊರು ಪ್ರಾಚೀನ ಕಾಲದಲ್ಲಿ ಪ್ರಸಿದ್ಧವಾದ ತೀರ್ಥಕ್ಷೇತ್ರವಾಗಿತ್ತೆಂದು ತಿಳಿದುಬರುವುದು. ಹಲವಾರು ಮನೆಗಳ ತಳಹದಿ, ಬಗೆಬಗೆಯ ಮೂರ್ತಿಗಳು, ದೇವಾಲಯಗಳ ಭಾಗಗಳು ಶಾಸನಗಳೇ ಮೊದಲಾದುವು ಅಸ್ತವ್ಯಸ್ತವಾಗಿ ಬಿದ್ದಿವೆ. ಇವುಗಳಿಂದಲೇ ಒಂದು ವಸ್ತು ಸಂಗ್ರಹಾಲಯವನ್ನು ನಿರ್ಮಿಸಬಹುದು ಎಂದಿದ್ದಾನೆ.

ಈ ಮೇಲೆ ವಿವರಿಸಲ್ಪಟ್ಟ ಅನೇಕ ಅಂಶಗಳನ್ನು ಮನಗಂಡರೆ ಹೂಲಿಯು ಸಂದರ್ಶನಕ್ಕೆ ಒಂದು ಯೋಗ್ಯ ಸ್ಥಾನವೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ. ಇದನ್ನು ನೋಡಹೋದವರು ಅವಶ್ಯವಾಗಿ ಅಕ್ಕಪಕ್ಕದಲ್ಲೇ ಇರುವ ಎಲ್ಲಮ್ಮನಗುಡ್ಡ, ಮಲಾಪಹಾರೀ ನದಿಯಲ್ಲಿ ಹೇಳಲಾಗುವ ನವಿಲುತೀರ್ಥ ಪ್ರದೇಶ, ಸೊಗಲಕ್ಷೇತ್ರ, ಮುನಿವಳ್ಳಿಗಳನ್ನು ನೋಡಿಬರುವುದು ಒಳ್ಳೆಯದು.

# ವಜ್ರದ ಕಂಠಸರ

(ಗೈ ಡಿ ಮೊಪಾಸಾಂತ್ ಎಂಬ ಪ್ರಖ್ಯಾತ ಸಾಹಿತಿಯ ಕಥೆಯ ಆಧಾರದಿಂದ)

—ಕ್ಯಾಪ್ಟನ್ ಎಂ. ಜಿ. ಕೆ. ಮೂಜಿ

ಲ್ಯೂಸಿ ಸ್ವರೂಪಿ. ತನ್ನ ಶಾಲೆಯಲ್ಲೆಲ್ಲಾ ಅತ್ಯಂತ ಚೆಲುವೆ ಹುಡು ಯೆಂದು ಗಣಿಸಲ್ಪಟ್ಟಿದ್ದಳು. ಅವಳ ಸೌಂದರ್ಯ, ಲಾವಣ್ಯವನ್ನು ಎಲ್ಲರೂ ಹೊಗ ತ್ತಿದ್ದುದನ್ನು ಕೇಳಿಕೇಳಿ ಅವಳಿಗೊಂದು ಹೆಮ್ಮೆಯಾಗಿತ್ತು. ಜನರು ತನ್ನನ್ನೂ, ತ ಜಾಣತನವನ್ನೂ ಮೆಚ್ಚಬೇಕು, ತನಗೆ ಪ್ರಣಯೋಕ್ತಿ ಹೇಳುತ್ತಿರಬೇಕು ಎಂಬ ಅ ಅವಳಲ್ಲಿ ಬಲವಾಗಿ ಬೇರೂರಿತ್ತು. ಬೆಲೆಬಾಳುವ ಬಟ್ಟೆ, ಒಡವೆಗಳನ್ನು ಧ ಒಯ್ಯಾರ, ಬೆಡಗು ಮಾಡಬೇಕೆಂಬ ಇಚ್ಛೆ; ಆದರೆ ಆ ಹುಡುಗಿ ಹುಟ್ಟಿದ್ದು ಬ ಕುಟುಂಬದಲ್ಲಿ. ಅವಳ ಮನೆತನದವರೆಲ್ಲಾ ಬಡವರು, ಆದ್ದರಿಂದ ಅವಳ ಬಯ ಗಳು ನೆರವೇರಲಿಲ್ಲ. "ಸಿರಿ, ಸಂಪತ್ತುಗಳಿರುವ ಮನೆತನದಲ್ಲಿ ನಾನು ಹುಟ್ಟಬೇ ಗಿತ್ತು. ಆ ಭಾಗ್ಯ ನನಗೆ ಲಭಿಸಲಿಲ್ಲ" ಎಂದು ಪದೇಪದೇ ಹೇಳಿಕೊಳ್ಳುತ್ತಿದ್ದ ಬಹು ಕಷ್ಟದಿಂದ ತಂದೆಯನ್ನು ಒಪ್ಪಿಸಿ ನೃತ್ಯಕ್ರೀಡೆ (ಬಾಲ್) ಯನ್ನು ಕಲಿತಳು.

ಶ್ರೀಮಂತ ಮನೆತನದಲ್ಲಿ ಲಗ್ನವಾಗಿ ಧನಿಕ ಗಂಡನ ಕೈಹಿಡಿದರೆ ತನ್ನ ಬಾ ಉತ್ತಮವಾಗುವುದೆಂದೂ, ತನ್ನ ಇಷ್ಟಾರ್ಥವೂ ಪೂರೈಸುವುದೆಂದೂ ಲ್ಯೂಸಿ ಹಾರೈ ತ್ತಿದ್ದಳು. ಆದರೆ ಬಡವರಾದ ತಂದೆ-ತಾಯಿಗಳಿಗೆ ಅಗತ್ಯದ ವರದಕ್ಷಿಣೆ ಕೊಡ ಚೈತನ್ಯವಿಲ್ಲದೆ, ಅವಳು ಬಡವರ ಮನೆಯನ್ನೇ ಸೇರಬೇಕಾಯಿತು. ಗಂಡ ಶಿಕ್ಷಣ ಇಲಾಖೆಯಲ್ಲಿ ಬಡ ಗುಮಾಸ್ತ, ಕಡಿಮೆ ಸಂಬಳ, ಭೂಮಿಕಾಣಿ ಅಥವಾ ಬೇರೆ ಮಾನವಿರಲಿಲ್ಲ. ಹರಕುಮುರುಕು ಮನೆ; ಕುಂಟ ಕುರ್ಚಿ; ಮಾಸಿದ ಬಟ್ಟೆಬರೆಗ ಹಿಂದೆ ಕಾನ್‌ವೆಂಟ್‌ನಲ್ಲಿ ಓದುತ್ತಿದ್ದ ಅವಳ ಇಬ್ಬರು ಸಹಪಾಠಿಗಳು ಆಡಂಬರದ ವ ಒಡವೆಗಳನ್ನು ತೊಟ್ಟು ರಮ್ಯ ಬಂಗಲೆಗಳಲ್ಲಿ ನೆಲಸಿದ್ದರು. ತನಗೆ ಆ ಸೌಕ ಗಳಿಲ್ಲ, ಅವರು ಪಾರ್ಟಿಗಳಿಗೆ ಹೋಗುತ್ತಿದ್ದರು; ತನಗೆ ಮಾತ್ರ ಯಾವ ಪಾರ್ಟಿಗ ಆಮಂತ್ರಣವಿಲ್ಲ. ಬಡತನದ ಸ್ಥಿತಿಗೆ ಹೊಂದಿಕೊಳ್ಳುವ ಮನೋವೃತ್ತಿಯಿ ಅವಳು ತನ್ನ ದುರ್ದೈವವನ್ನು ಶಪಿಸುತ್ತಾ ದುಃಖ, ನಿರಾಶೆಗಳಿಂದ ಕಣ್ಣೀರಿಡುತ್ತಿದ್ದ

ಲ್ಯೂಸಿಯು ಸದಾ ಖಿನ್ನಳಾಗಿ ಜೋಲುಮುಖ ಹಾಕಿಕೊಂಡಿರುತ್ತಿದ್ದುದ ನೋಡಿ ಅವಳ ಗಂಡನೂ ದುಃಖಿಯಾಗಿದ್ದ. ಒಂದು ಸಂಜೆ ಅವನು ಪರಮಾನ ದಿಂದ ಹೆಂಡತಿಯ ಬಳಿಗೆ ನಲಿಯುತ್ತಾ ಬಂದು ಅವಳಿಗೆ ಬಹು ಅಂದವಾದ ಒ

ಸಿದ್ಧಗಂ

ಲಕ್ಕೋಟೆಯನ್ನು ಕೊಟ್ಟ. ಅವಳು ಅದನ್ನು ಒಡೆದು ನೋಡಿದಳು. ಅದು ಶಿಕ್ಷಣಾ ಇಲಾಖೆಯ ಮಂತ್ರಿಗಳು ಮುಂದಿನ ವಾರ ತಮ್ಮ ಮಹಲಿನಲ್ಲಿ ನಡೆಯಲಿದ್ದ ನೃತ್ಯ ಕ್ರೀಡೆ ಕೂಟ ಸಮಾರಂಭಕ್ಕೆ ಬರಲು ಅವಳಿಗೂ, ಅವಳ ಗಂಡನಿಗೂ ಕಳುಹಿಸಿದ್ದ ಆಮಂತ್ರಣ.

ಅದನ್ನು ನೋಡಿ ಹೆಂಡತಿಗೆ ಬಹು ಸಂತೋಷವಾಗುವುದೆಂದು ಅವನು ನಂಬಿದ್ದ. ಆದರೆ ಅವಳು ಸ್ವಲ್ಪವೂ ಸಂತೋಷಪಡದೆ, "ಇದರಿಂದ ಏನು ಬಂದಂತಾಯ್ತು ? ಇದು ನನಗೆ ಬೇಡ" ಎಂದು ಹೇಳುತ್ತಾ ಅದನ್ನು ಮೇಜಿನಮೇಲೆ ಎಸೆದಳು.

"ನಿನ್ನ ಸಂತೋಷಕ್ಕಾಗಿ ಇದನ್ನು ತಂದಿದ್ದೇನೆ, ಇದು ಸಾಮಾನ್ಯರಿಗೆ ದೊರಕು ವುದಿಲ್ಲ. ಬಹು ಪ್ರಯಾಸಪಟ್ಟು ಇದನ್ನು ನಿನಗಾಗಿ ತಂದಿದ್ದೇನೆ. ಈ ಕೂಟದಲ್ಲಿ ಮಹಾಮಾನ್ಯರೂ, ರಾಜಕುಲೀನರೂ, ಉನ್ನತ ಶ್ರೇಣಿಯ ಮಹಿಳೆಯರೂ ನೆರೆಯು ವರು. ನಿನಗೆ ಅವರೆಲ್ಲರ ಪರಿಚಯವಾಗುವುದು, ಇದೊಂದು ಅಪೂರ್ವ ಸಂದರ್ಭ. ಇಂಥದನ್ನು ಬಿಡುವುದುಂಟೆ ?" ಎಂದು ಹೇಳಿದ.

"ಅಲ್ಲಿಗೆ ಬರುವ ಸ್ತ್ರೀಯರೆಲ್ಲ ಭವ್ಯ ಉಡುಪನ್ನು ಧರಿಸಿ ಬಹು ಪ್ರತಾಪದಿಂದಿರು ವರು. ನನಗೆಲ್ಲಿದೆ? ನಾಚಿಕೆಗೇಡು ; ಮಾನಹಾನಿಯಾಗುವುದು, ಒಳ್ಳೆ ಬಟ್ಟೆ ಯಿರುವ ಇನ್ಯಾರಿಗಾದರೂ ಇದನ್ನು ಕೊಡಿ, ನನಗೆ ಬೇಡ" ಎಂದು ಲ್ಯೂಸಿ ತಿಳಿಸಿ ದಳು.

ಗಂಡನು ಕೊರಗಿದ, "ಅಯ್ಯೋ ಪಾಪ ! ಇಷ್ಟು ವರ್ಷಗಳಿಂದ ನೀನು ಯಾವ ಪಾರ್ಟಿಗೂ ಹೋಗಲಿಲ್ಲ. ಇದಕ್ಕೆ ಹೋಗಲೇಬೇಕು, ಹೆಚ್ಚು ಆಡಂಬರವಿಲ್ಲದ ಹೊಸ ಉಡುಪಿಗೆ ಎಷ್ಟು ಖರ್ಚಾಗುತ್ತದೆ ?" ಎಂದು ಕೇಳಿದ.

ಹೆಚ್ಚು ದುಡ್ಡು ಕೇಳಿದರೆ ಗಂಡನಿಗೆ ಅಂಜಿಕೆಯಾಗಿ ಅವನು ಕೊಡದಿರಬಹು ದೆಂದು ಯೋಚಿಸಿ, "ನಾನು ಇಷ್ಟೇ ಎಂದು ಖಂಡಿತ ಹೇಳಲಾರೆ. ೪೦೦ ಫ್ರಾಂಕ್ ಗಳು ಸಾಕೆಂದು ನನಗೆ ತೋರುತ್ತದೆ" ಎಂದು ಹೇಳಿದಳು.

ಅವನ ಮುಖ ಬಾಡಿತು, ಬೇಸಗೆಯ ವಿಹಾರ–ಪಯಣಕ್ಕೆಂದು ಅವನು ಅಷ್ಟು ಹಣವನ್ನು ಬಹಳ ವರ್ಷಗಳಿಂದ ಶೇಖರಿಸಿದ್ದ. "೪೦೦ ಫ್ರಾಂಕ್‌ಗಳನ್ನು ಕೊಡು ವೆನು, ಉಡುಪಿಗೆ ಸಿದ್ಧತೆ ಮಾಡು" ಎಂದು ಹೇಳಿದ.

ನೃತ್ಯಕೂಟದ ದಿನ ಸಮೀಪಿಸಿತು, ಅವಳ ಉಡುಪೂ ತಯಾರಾಯಿತು. ಆದರೂ ಅವಳು ಏನೋ ಚಿಂತೆ, ಕಳವಳದಲ್ಲಿದ್ದಳು. "ವಿಷಯವೇನು ? ಅದೇನು ಚಿಂತೆ ?" ಎಂದು ಗಂಡ ಕೇಳಿದ.

"ನನಗೆ ಏನೇನೂ ಒಡವೆಗಳೇ ಇಲ್ಲ. ಒಂದು ಕಲ್ಲಿನ ಹರಳು ಕೂಡ ಇಲ್ಲ. ಹೀಗೆಯೇ ಹೋದರೆ ಭಿಕಾರಿಯಂತೆ ಕಾಣುವೆನು. ನಾನು ಈ ಪಾರ್ಟಿಗೆ ಹೋಗುವುದು ಯುಕ್ತವಲ್ಲ" ಎಂದು ಉತ್ತರಿಸಿದಳು.

"ನೀನು ಪುಷ್ಪಗಳನ್ನು ಧರಿಸಬಹುದು, ಈ ಋತುವಿನಲ್ಲಿ ಅವು ಚೆನ್ನಾಗಿ ಒಪ್ಪುತ್ತವೆ. ಎಂಟು ಫ್ರಾಂಕ್‌ಗೆ ಎರಡು ಅಥವಾ ಮೂರು ಸೊಗಸಾದ ಗುಲಾಬಿಗಳು ದೊರಕುತ್ತವೆ" ಎಂದು ಹೇಳಿದ.

"ಉಂಟೆ? ಉಂಟೆ? ಅಷ್ಟು ಮಂದಿ ಶ್ರೀಮಂತ ಸ್ತ್ರೀಯರ ಮಧ್ಯೆ ನಾನೊಬ್ಬಳು ಹಾಗಿದ್ದರೆ ನನಗೆ ತೇಜೋಭಂಗವಾದಂತಾಗುವುದು. ನಾನು ಅವರಿಗೆ ಕತ್ತೆತ್ತಿ ಮುಖತೋರಿಸಲಾಗುವುದಿಲ್ಲ" ಎಂದು ಹೇಳಿದಳು.

ಗಂಡನಿಗೆ ದಿಗ್ಭ್ರಮೆಯಾಯಿತು. ಸ್ವಲ್ಪ ಯೋಚಿಸಲು ಒಂದು ವಿಷಯ ಹೊಳೆಯಿತು. "ಮೆಡಾಂ ಜೇನ್‌ಳ ಪರಿಚಯ ನಿನಗೆ ಚೆನ್ನಾಗಿದೆ. ಆಕೆಗೆ ಕೆಲವು ಆಭರಣಗಳನ್ನು ಎರವಾಗಿ ಕೊಡಲು ಹೇಳು. ಪಾರ್ಟಿಯನಂತರ ಅವುಗಳನ್ನು ವಾಪಸ್ಸು ಕೊಟ್ಟುಬಿಡು."

ಲ್ಯೂಸಿ ಜೇನಳ ಬಳಿಗೆ ಹೋಗಿ ವಿಷಯಗಳನ್ನು ತಿಳಿಸಿದಳು. ಜೇನಳು ತನ್ನ ಕಪಾಟಿನಿಂದ ಕೆಲವು ಚಿನ್ನ, ವಜ್ರ, ಕೆಂಪು ಮುಂತಾದ ಒಡವೆಗಳನ್ನು ತೆಗೆದು ತೋರಿಸಿದಳು. ಲ್ಯೂಸಿಯು ಅವುಗಳನ್ನು ಒಂದೊಂದಾಗಿ ಧರಿಸಿ ನಿಲುಗನ್ನಡಿಯ ಮುಂದೆ ನಿಂತು ನೋಡಿಕೊಳ್ಳುತ್ತಾ ಹಿರಿಹಿರಿ ಹಿಗ್ಗಿದಳು. ಕೊನೆಗೆ "ಇವುಗಳಲ್ಲದೆ ಮತ್ತಾವುದೂ ಇಲ್ಲವೆ?" ಎಂದು ಕೇಳಿದಳು.

"ಬಹಳ ಇವೆ. ಅವುಗಳನ್ನೆಲ್ಲಾ ನೀನೇ ನೋಡಿ ನಿನಗೆ ಇಷ್ಟವಾದುದನ್ನು ಆರಿಸಿ ತೆಗೆದುಕೊ" ಎಂದು ಹೇಳಿದಳು.

ಲ್ಯೂಸಿ ಇವುಗಳನ್ನು ಮುಟ್ಟಿಮುಟ್ಟಿ ನೋಡುತ್ತಾ ಒಂದು ಕಪ್ಪು ಮಕಮಲ್ಲಿನ ಪೆಟ್ಟಿಗೆಯಲ್ಲಿ ಕಣ್ಣುಕೋರೈಸುವ, ಮನಮೋಹಕ ವಜ್ರಗಳ ಹಾರವನ್ನು ಕಂಡಳು. ನಡುಗುವ ಕೈಗಳಿಂದ ಅದನ್ನು ಹೊರತೆಗೆದಳು. ಕಂಠಕ್ಕೆ ಹಾಕಿಕೊಂಡು ಕನ್ನಡಿಯ ಮುಂದೆ ನಿಂತು ನೋಡಿಕೊಳ್ಳುತ್ತಾ ಅತ್ಯಾನಂದದಲ್ಲಿ ತಲ್ಲೀನಳಾದಳು. "ಇದನ್ನು ನನಗೆ ಎರವಾಗಿ ಕೊಡುವಿರಾ? ಇದು ವಿನಾ ನನಗೆ ಮತ್ತಾವುದೂ ಬೇಡ." ಎಂದು ಬಹು ಅನುಮಾನದಿಂದ ಕೇಳಿದಳು.

"ಅಗತ್ಯವಾಗಿ ತೆಗೆದುಕೊಂಡು ಹೋಗಿ" ಎಂದು ಜೇನ್ ಹೇಳಿದಳು.

ಲ್ಯೂಸಿಯು ಪರಮಾನಂದದಿಂದ ಅಭಿವಂದನೆಗಳನ್ನು ತಿಳಿಸಿ ಹಾರದೊಡನೆ ಹೊರಟಳು.

ನೃತ್ಯಕೂಟದ ರಾತ್ರಿ ಲ್ಯೂಸಿ ಹೊಸ ಉಡುಪನ್ನೂ ಕಂಠಸರವನ್ನೂ ಧರಿಸಿ ಮಾನ್ಯ ಮಂತ್ರಿಗಳ ಮಹಲಿಗೆ ಹೋದಳು. ನೂರಾರು ಮಂದಿ ಉನ್ನತ ದರ್ಜೆಯ ಅತಿಥಿಗಳು ನೆರೆದಿದ್ದರು. ಅಲ್ಲಿದ್ದ ಮಹಿಳೆಯರಲ್ಲೆಲ್ಲಾ ಇವಳೇ ಅತ್ಯಂತ ಸುಂದರಳೂ, ಮನೋಹರಳೂ ಆಗಿದ್ದಳು. ಎಲ್ಲರ ಲಕ್ಷ್ಯ, ಆಸಕ್ತಿಗಳನ್ನು ಸೆಳೆದಳು. ಎಲ್ಲರೂ ಅವಳನ್ನು ನೋಡುತ್ತಾ ಅವಳ ಹೆಸರನ್ನು ಕೇಳುತ್ತಿದ್ದರು. ಕುಲೀನ ಪುರುಷರು ಒಬ್ಬೊಬ್ಬರಾಗಿ ಅವಳೊಡನೆ ನರ್ತಿಸಲು ಆಹ್ವಾನಿಸುತ್ತಿದ್ದರು. ಈ ರೀತಿಯ ಮೆಚ್ಚಿಗೆ, ಹೊಗಳಿಕೆ, ಉಬ್ಬರದ ಅಮಲಿನಲ್ಲಿ ಲ್ಯೂಸಿ ಆನಂದ ಪರವಶಳಾದಳು. ಮಂದಹಾಸವನ್ನು ಬೀರುತ್ತಾ ಎಲ್ಲರೊಡನೆ ನರ್ತಿಸಿದಳು. ಇಷ್ಟು ವರ್ಷಗಳೂ ಸುಪ್ತವಾಗಿದ್ದ ಅವಳ ಆಶೆ ಆಕಾಂಕ್ಷೆಗಳು ಇಂದು ಪರಮಾವಧಿಯ ತೃಪ್ತಿಯನ್ನು ಪಡೆದವು.

ಬೆಳಗಿನ ಜಾವ ನಾಲ್ಕು ಗಂಟೆಗೆ ನೃತ್ಯಕ್ರೀಡೆಯು ಸಮಾಪ್ತವಾಯಿತು. ಅವಳ ಗಂಡನು ಅಲ್ಲೊಂದು ಕೊಠಡಿಯಲ್ಲಿ ಅರೆ ನಿದ್ರೆಯ ಕಣ್ಣುಗಳಿಂದ ಅವಳಿಗಾಗಿ ಕಾದಿದ್ದ. ಮನೆಗೆ ಹೊರಡಲು ಅವಳ ಹೆಗಲಿನ ಸುತ್ತಲೂ ಮೇಲು ಹೊದಿಕೆಯ ಕುಂಚಿಗೆಯನ್ನು ಹಾಕಿದ. ಅದು ಅರ್ಧ ಮಾಸಿದ ಸಾಮಾನ್ಯ ಬಟ್ಟೆ. ಉಳಿದ ಸ್ತ್ರೀಯರು ಸೊಗಸಾದ ಫರ್ ಹೊದಿಕೆಗಳನ್ನು ತೊಡುತ್ತಿದ್ದರು. ತನ್ನ ದಾರಿದ್ರ್ಯಾವಸ್ಥೆಯು ಇತರರಿಗೆ ತಿಳಿಯದಿರಲೆಂದು ಲ್ಯೂಸಿಯು ಬೇಗ ಬೇಗ ಮೆಟ್ಟಲುಗಳಿಂದ ಕೆಳಗಿಳಿದು ಮುಂದೆ ಮುಂದೆ ಸಾಗ ತೊಡಗಿದಳು. "ಹೊರಗೆ ಬಹು ಚಳಿ, ಗಾಡಿಯನ್ನು ತರಲು ನಾನು ಹೋಗುತ್ತಿದ್ದೇನೆ. ಗಾಡಿ ಬರುವವರೆಗೂ ಇಲ್ಲಿ ಒಳಗೇ ಇರು" ಎಂದು ಗಂಡನು ಎಷ್ಟು ಹೇಳಿದರೂ ಅವಳು ಕೇಳದೆ ಹೊರಗೆ ಹೊರಟೇಬಿಟ್ಟಳು.

ಅವರು ಬೀದಿಗೆ ಹೋದಾಗ ಅಲ್ಲಿ ಯಾವ ಬಾಡಿಗೆ ಗಾಡಿಯೂ ಕಾಣಲಿಲ್ಲ. ಶರದೃತುವಿನ ಚಳಿಯಲ್ಲಿ ಗಡಗಡನೆ ನಡುಗುತ್ತಾ ನದಿಯ ಪಕ್ಕದಲ್ಲಿ ನಡೆದುಹೋದರು. ಕೊನೆಗೆ ಒಂದು ಹಳೆಯ ಮುರುಕಲು ಗಾಡಿ ಸಿಕ್ಕಿತು. ಅದರಲ್ಲಿ ಕುಳಿತು ಮನೆಯನ್ನು ಸೇರಿದರು.

ಲ್ಯೂಸಿಯ ಕೆಲಸ ಮುಗಿದಿತ್ತು. ಗಂಡ ಹತ್ತು ಗಂಟೆಗೆ ಕಚೇರಿಗೆ ಹೋಗಬೇಕೆಂಬ ಯೋಚನೆಯಲ್ಲಿ ಮಲಗಿದರೆ ಸಾಕೆಂದು ಹಾಸಿಕೆಗೆ ಹೋಗುವವನಿದ್ದ. ಹೆಂಡತಿಯು ತನ್ನ ಜಯೋತ್ಸವದ ಸಂಭ್ರಮವನ್ನು ಮೆಲುಕುಹಾಕುತ್ತಾ ಮೇಲು ಹೊದಿಕೆಯ ಕುಂಚಿಗೆಯನ್ನು ತೆಗೆದಳು. ತನ್ನ ಶೋಭೆಯನ್ನು ಇನ್ನೊಂದು ಸಾರಿ ನೋಡಿಕೊಳ್ಳಲು ಕನ್ನಡಿಯ ಮುಂದೆ ನಿಂತುಕೊಂಡಳು. ಏಕಾಏಕಿ ಚೀರಿದಳು. ತನ್ನ ಕತ್ತಿನಲ್ಲಿದ್ದ ರತ್ನಹಾರವು ಮಾಯವಾಗಿತ್ತು !

1982

" ಏನಾಯಿತು ! ಅದೇಕೆ ಹೀಗೆ ಚೀರಿದೆ ? " ಎಂದು ಗಂಡನು ಪ್ರಶ್ನಿಸಿದ.

" ಇದೇನು ವಿಚಿತ್ರ ! ಎಂಥ ಭ್ರಮೆ ! ಜೇನಳ ವಜ್ರಹಾರವು ನನ್ನ ಕಂಠದಲ್ಲಿಲ್ಲ !" ಎಂದು ಭಯದಿಂದ ಉದ್ಗರಿಸಿದಳು.

ಮಲಗಿದ್ದ ಗಂಡನು ಚಂಗನೆ ಮೇಲೆದ್ದ. ಅದು ಹೇಗೆ ಸಾಧ್ಯವೆಂದು ಕೂಗಿಕೊಂಡ.

ಇಬ್ಬರೂ ನೃತ್ಯದ ಉಡುಪಿನ ಮಡಿಕೆಗಳನ್ನೂ, ಕುಂಚಿಗೆಯನ್ನೂ, ಜೇಬುಗಳನ್ನೂ ಬಹು ಶ್ರದ್ಧೆಯಿಂದ ಪುನಃ ಪುನಃ ಶೋಧಿಸಿದರು. ಮಾಲೆಯ ಸುಳಿವೇ ಸಿಕ್ಕಲಿಲ್ಲ.

"ಇಡೀ ನೃತ್ಯದ ಅವಧಿಯಲ್ಲಿ ಹಾರವು ನನ್ನ ಕಂಠದಲ್ಲಿತ್ತು. ನಾವು ಮಂತ್ರಿಗಳ ಗೃಹದಿಂದ ಹೊರಗೆ ಬಂದಾಗಲೂ ಮಾಲೆಯು ನನ್ನ ಕಂಠದಲ್ಲಿದ್ದುದನ್ನು ನಾನು ಕುಂಚಿಗೆಯನ್ನು ಮುಟ್ಟಿ ನೋಡಿಕೊಂಡೆ. ದಾರಿಯ ರಸ್ತೆಯಲ್ಲಿ ಬಿದ್ದಿದ್ದರೆ ಅದರ ಶಬ್ದವು ಕೇಳಿಸುತ್ತಿತ್ತು. ಹಾಗಾಗಲಿಲ್ಲ. ಅದು ಕುದುರೆ ಗಾಡಿಯೊಳಗೇ ಬಿದ್ದಿರಬೇಕು" ಎಂದು ಅವಳು ಖಚಿತವಾಗಿ ಹೇಳಿದಳು.

ಅವರು ಗಾಡಿಯ ಸಂಖ್ಯೆಯನ್ನು ನೋಡಿರಲಿಲ್ಲ. ಅವನು ಬಟ್ಟೆ ಹಾಕಿಕೊಂಡು ಅವರು ಬಂದಿದ್ದ ದಾರಿಯಲ್ಲೆಲ್ಲಾ ಏಳು ಗಂಟೆಯವರೆಗೂ ಹುಡುಕಿದ. ಎಲ್ಲೂ ಹಾರವಿರಲಿಲ್ಲ. ಪೋಲೀಸ್ ಠಾಣೆಗೂ, ಗಾಡಿಗಳ ಕಛೇರಿಗಳಿಗೂ, ಹೋಗಿ ವರದಿ ಮಾಡಿದ. ವೃತ್ತಪತ್ರಿಕೆಗಳಲ್ಲೆಲ್ಲಾ ಜಾಹಿರಾತನ್ನು ಪ್ರಕಟಿಸಿ ಹುಡುಕಿಕೊಟ್ಟವರಿಗೆ ಪುಷ್ಕಳ ಬಹುಮಾನವನ್ನು ಕೊಡುವುದಾಗಿ ತಿಳಿಸಿದ.

ಈ ವಿಪತ್ತಿನಿಂದ ದಂಪತಿಗಳು ಕಂಗಾಲಾದರು, ಹಾರವು ಕಳೆದುಹೋಯಿತೆಂದು ಜೇನ್‌ಗೆ ತಿಳಿಸಲು ಅವರಿಗೆ ಮುಖವಿರಲಿಲ್ಲ. "ಹಾರದ ಒಂದು ಕೊಂಡಿ ಮುರಿದು ಹೋಗಿದೆ. ಅದನ್ನು ಅಕ್ಕಸಾಲಿಗನಿಂದ ಸರಿಮಾಡಿಸಿದನಂತರ ಹಾರವನ್ನು ತಂದು ಕೊಡುವೆನು" ಎಂದು ಲ್ಯೂಸಿ ಜೇನಳಿಗೆ ಬರೆದಳು.

ಒಂದು ವಾರ ಕಳೆಯಿತು, ಹಾರದ ಸುಳಿವೇ ಸಿಕ್ಕಲಿಲ್ಲ. ಇನ್ನು ಅದು ಸಿಕ್ಕುವ ಆಶೆಯೇ ಇರಲಿಲ್ಲ. ಕಳೆದು ಹೋದ ಹಾರದ ಬದಲು ಒಂದು ಹೊಸ ಹಾರವನ್ನು ಜೇನಳಿಗೆ ತಂದುಕೊಟ್ಟು ಅವಳ ಹಾರವು ಕಳೆದುಹೋಯಿತೆಂದು ನಾವು ಅವಳಿಗೆ ತಿಳಿಸಬಾರದು ಎಂದು ನಿಶ್ಚಯಿಸಿದರು.

ಮಾರನೆ ದಿನ ಅವರು ಹಾರದ ಪೆಟ್ಟಿಗೆಯೊಳಗಿದ್ದ ಹೆಸರಿನ ರತ್ನಗಾರನ ಅಂಗಡಿಗೆ ಹೋಗಿ ವಿಚಾರಿಸಿದರು. ಅವನು ತನ್ನ ದಾಖಲೆಯ ಪುಸ್ತಕವನ್ನು ನೋಡಿ "ನಾನು ಈ ಪೆಟ್ಟಿಗೆಯನ್ನು ಮಾತ್ರ ಕೊಟ್ಟಿದ್ದೆ. ಹಾರವನ್ನು ಕೊಟ್ಟಿರಲಿಲ್ಲ" ಎಂದು ಹೇಳಿದ.

ನಂತರ ಅವರು ಒಂದೊಂದಾಗಿ ಅನೇಕ ಸರಾಫರ ಅಂಗಡಿಗಳಿಗೆ ಹೋಗಿ ವಿಚಾರಿಸಿ ಅಲ್ಲಿದ್ದ ರತ್ನದ ಹಾರಗಳನ್ನೆಲ್ಲಾ ನೋಡಿದರು. ಕಡೆಗೆ ಒಂದು ಅಂಗಡಿಯಲ್ಲಿ ಅದೇ ತರದ ಹಾರವನ್ನು ಕಂಡರು. ಸರಾಫನು ಅದರ ಬೆಲೆ ೩೬,೦೦೦ ಫ್ರಾಂಕ್‌ಗಳೆಂದು ಹೇಳಿದ. ಬಹಳ ಚೌಕಾಸಿಮಾಡಿ ಬೆಲೆಯನ್ನು ೩೫,೦೦೦ ಫ್ರಾಂಕ್‌ಗಳಿಗೆ ಇಳಿಸಿದರು. ಕಳೆದುಹೋದ ಹಾರವು ಮೂರು ತಿಂಗಳುಗಳೊಳಗೆ ಸಿಕ್ಕಿದರೆ ಈ ಹೊಸಹಾರವನ್ನು ೩೨,೦೦೦ ಫ್ರಾಂಕ್‌ಗಳಿಗೆ ವಾಪಸ್ಸು ತೆಗೆದುಕೊಳ್ಳಲು ರತ್ನಗಾರನು ಒಪ್ಪಿಕೊಂಡ.

ಲ್ಯೂಸಿಯ ಗಂಡನಿಗೆ ರಾತ್ರಿ ಹಗಲು ಇದೇ ಯೋಚನೆಯಾಯಿತು. ಅಷ್ಟು ಸಾಲವನ್ನು ತೆಗೆದರೆ ತಾನು ಸಾಯುವುದಕ್ಕೆ ಮುಂಚೆ ಅದನ್ನೆಲ್ಲಾ ತೀರಿಸಲು ಸಾಧ್ಯವೇ ಎಂದು ಕೊರಗಿದ. ಅನೇಕ ಮಂದಿ ಸಾಲಕೊಡುವವರಿಂದ ಬಡ್ಡಿ ಕೊಟ್ಟು ಸಾಲವನ್ನು ತೆಗೆದುಕೊಂಡ. ೩೫,೦೦೦ ಫ್ರಾಂಕುಗಳನ್ನು ರತ್ನಗಾರನಿಗೆ ಕೊಟ್ಟು ಆ ರತ್ನದ ಹಾರವನ್ನು ಹೆಂಡತಿಗೆ ಕೊಂಡೊಯ್ದ. ಅವಳು ಅದನ್ನು ಜೇನಳಿಗೆ ಕೊಟ್ಟುಬಿಟ್ಟಳು.

ಲ್ಯೂಸಿಗೂ ಈಗ ತಲೆತಾಕಿ ಬುದ್ಧಿಬಂತು. ಅಷ್ಟು ಭಾರಿ ಸಾಲವನ್ನು ತೀರಿಸಲು ತನ್ನ ದುಂದುಗಾರಿಕೆಯನ್ನು ತಡೆದು ಮಿತವ್ಯಯದ ಜೀವನ ಅಗತ್ಯವೆಂದು ಖರೆಯಾಯಿತು. ಅಡಿಗೆ, ಬಟ್ಟೆ ಒಗೆತ, ನೀರು ಹೊರುವುದು, ಹಣ್ಣು, ತರಕಾರಿ, ಧಾನ್ಯ ದವಸಗಳನ್ನು ತರುವುದು, ಇತ್ಯಾದಿ ಮನೆಗೆಲಸಗಳನ್ನೆಲ್ಲಾ ತಾನೇ ಮಾಡುತ್ತಾ ದುಡ್ಡಿನ ಉಳಿತಾಯಮಾಡಿದಳು. ಗಂಡನು ತನ್ನ ದಿನಗಟ್ಟಲೆ ಕೆಲಸವೇ ಅಲ್ಲದೆ ಸಂಜೆ ಅಂಗಡಿಯಲ್ಲಿ ಲೆಕ್ಕ ಬರೆಯುತ್ತಾ, ರಾತ್ರಿ ಇನ್ನೊಂದು ಖಾಸಗಿ ಅಂಗಡಿಯಲ್ಲಿ ನೌಕರಿ ಮಾಡುತ್ತಾ ಬಹು ಪರಿಶ್ರಮದಿಂದ ಹೆಚ್ಚು ದುಡ್ಡು ಸಂಪಾದಿಸತೊಡಗಿದ.

ಹನ್ನೆರಡು ವರ್ಷಗಳ ಈ ಕಷ್ಟ ಜೀವನ ಕಳೆಯಿತು. ಅಷ್ಟು ಹೊತ್ತಿಗೆ ಲ್ಯೂಸಿಯು ನಿರಂತರದ ವ್ಯಥೆಯಿಂದ ಮುದುಕಿಯಂತೆ ಕಾಣುತ್ತಿದ್ದಳು. ಸಾಲವೆಲ್ಲವೂ ತೀರಿಹೋಯಿತು.

ಒಂದು ದಿನ ಲ್ಯೂಸಿಯು ನದೀ ತೀರದಲ್ಲಿ ಹೋಗುತ್ತಿದ್ದಾಗ ಒಬ್ಬ ಕುಲೀನ ಸ್ತ್ರೀ ಒಂದು ಮಗುವಿನ ಜೊತೆಯಲ್ಲಿ ತಿರುಗಾಡುತ್ತಿದ್ದುದನ್ನು ಕಂಡು ಅವಳೊಡನೆ

ಮಾತನಾಡಲು ಹೋದಳು. ಅವಳು ಇನ್ನೂ ಯುವತಿಯಂತಿದ್ದಳು, ಬಹು ಸರಳ ಉಡುಪನ್ನು ಧರಿಸಿ ಮುದುಕಿಯಂತಿದ್ದ ಲ್ಯೂಸಿಯನ್ನು ಅವಳು ಗುರುತಿಸಲಿಲ್ಲ.

"ಏನು ಜೇನ್, ನನ್ನನ್ನು ಮರೆತುಬಿಟ್ಟಿರಾ ? ನಾನು ಲ್ಯೂಸಿ" ಎಂದಳು.

"ಇದೆಂಥ ವಿಚಿತ್ರ, ಲ್ಯೂಸಿ ? ಎಷ್ಟು ಮುದುಕಿಯಾಗಿಬಿಟ್ಟೆ ?" ಎಂದು ಜೇನ್ ಕೇಳಿದಳು,

"ಹನ್ನೆರಡು ವರ್ಷಗಳ ಹಿಂದೆ ಶಿಕ್ಷಣ ಮಂತ್ರಿಯವರ ಮಹಲಿನಲ್ಲಿ ನೃತ್ಯ ಕ್ರೀಡೆಯ ಪಾರ್ಟಿಗೆ ನಾನು ನಿಮ್ಮಿಂದ ಒಂದು ಕಂಠಹಾರವನ್ನು ಎರವು ತೆಗೆದು ಕೊಂಡು ಹೋದದ್ದು ನಿಮಗೆ ಜ್ಞಾಪಕವಿದೆಯೆ ?" ಎಂದು ಲ್ಯೂಸಿ ಕೇಳಿದಳು.

"ಚೆನ್ನಾಗಿ ನೆನಪಿದೆ, ನೀವು ಅದನ್ನು ವಾಪಸ್ಸು ಕೊಟ್ಟುಬಿಟ್ಟಿ. ಅದರ ಮಾತು ಅಂದೇ ಮುಗಿದುಹೋಯಿತು, ಈಗ ಯಾತಕ್ಕೆ ಆ ಮಾತು ?"

"ನೀವು ಕೊಟ್ಟ ಹಾರವನ್ನು ದುರ್ದೈವದಿಂದ ನಾನು ಕಳೆದುಬಿಟ್ಟೆ, ಸ್ವಲ್ಪವೂ ವ್ಯತ್ಯಾಸ ಕಾಣದಂತೆ ಅದರಂತೆಯೇ ಇದ್ದ ವಜ್ರದ ಹಾರವನ್ನು ೩೫,೦೦೦ ಫ್ರಾಂಕ್‌ಗೆ ಕೊಂಡು ನಿಮಗೆ ಕೊಟ್ಟೆ. ಆ ಸಾಲವನ್ನು ತೀರಿಸಲು ೧೨ ವರ್ಷಗಳು ಹಿಡಿಯಿತು".

"ಏನೆಂದಿರಿ, ಲ್ಯೂಸಿ ? ನೀವು ನನಗೆ ಕೊಟ್ಟದ್ದು ವಜ್ರದ ಹಾರವೆ ? ನನ್ನಿಂದ ನೀವು ತೆಗೆದುಕೊಂಡಿದ್ದದ್ದು ವಜ್ರದ ಹಾರವಲ್ಲ; ನಕಲಿ ಹಾರ. ವಜ್ರದಂತೆ ಕಾಣುತ್ತಿತ್ತು ಅಷ್ಟೆ. ಅದರ ಬೆಲೆ ೩೫೦ ಫ್ರಾಂಕ್ ಮಾತ್ರ. ಎಂಥ ಕೆಲಸ ಮಾಡಿದಿರಿ ? " ಎಂದು ಜೇನ್ ಹೇಳಿದಾಗ ಲ್ಯೂಸಿ ಕಣ್ಣು ಕಣ್ಣು ಬಿಡುತ್ತಾ ಕಸಿವಿಸಿಯಾದಳು.

## ಮಾನ

ಉಳಿಸು ನನ್ನ ಮಾನ ಎನ್ನುವನು
ಕೈಮುಗಿಯುವನು ; ಕಾಲಿಗೂ ಬೀಳುವನು ;
ಹಿಂದೆ ಎಂದೋ ಹೋಗಿರುವುದು ಗೊತ್ತಿಲ್ಲ
ಅದನ್ನು ತಡೆಹಿಡಿಯುವ ಪ್ರಯತ್ನದಲ್ಲೇ ಇರುವನಲ್ಲಾ !

—ಎಸ್. ನಾಗಭೂಷಣಯ್ಯ

# ಆಹಾರ ಸಮಸ್ಯೆಯ ಜಟಿಲತೆ

—ಡಿ. ವೆಂಕಟರಾವ್, ಎಂ.ಎ.,

ಇಂದು ನಮ್ಮ ದೇಶ ಎದುರಿಸುತ್ತಿರುವ ಹಲವಾರು ಭೀಕರ ಸಮಸ್ಯೆಗಳಲ್ಲಿ ಎಲ್ಲಕ್ಕಿಂತಲೂ ಜಟಿಲ ಹಾಗೂ ಪ್ರಮುಖವಾದ ಸಮಸ್ಯೆ ಎಂದರೆ ಆಹಾರ ಸಮಸ್ಯೆ. ಬರಿಯ ಹೊಟ್ಟೆಯಿಂದ ಯಾವ ದೇಶವೂ ಸ್ಥಿರತೆ ಸಾಧಿಸಲಾರದು. ಆಹಾರವಿಲ್ಲದೆ ಬಳಲುತ್ತಿರುವ ಮನುಷ್ಯನಿಗೆ ಸಮಾಜವಾದ ಹಾಗೂ ಪ್ರಜಾಪ್ರಭುತ್ವದ ಬಗ್ಗೆ ತಿಳಿಯ ಹೇಳಿದರೆ ಅವು ಕೇವಲ ಶೂನ್ಯ ಪದಗಳಾಗಿ ತೋರುವುದು ಸಹಜ. ಮನುಷ್ಯನಲ್ಲಿ ತಾನು, ತನ್ನ ಕುಟುಂಬ, ತನ್ನ ಸಮಾಜ, ತನ್ನ ದೇಶ ಇವುಗಳ ಬಗ್ಗೆ ಆಸಕ್ತಿ, ಅಭಿಮಾನಗಳು ಮೂಡಬೇಕಾದರೆ ಮೊದಲು ಅವನ ಮೂಲಭೂತವಾದ ಹಸಿವು ಇಂಗ ಇಂಗಬೇಕು. ದೇಶ ಆರ್ಥಿಕಾಭಿವೃದ್ಧಿಯನ್ನು ಸಾಧಿಸಬೇಕಾದರೆ ಮೊಟ್ಟ ಮೊದಲು ಮೂಲಭೂತವಾದ ಆಹಾರದ ಪೂರೈಕೆ ಸಾಕಷ್ಟು ಸಾಕಷ್ಟು ಪ್ರಮಾಣದಲ್ಲಿ ಜನತೆಗೆ ದೊರೆಯಬೇಕು. ಇಂದು ನಮ್ಮನ್ನು ಕಾಡುತ್ತಿರುವ ಅನೇಕ ಮಾರಕ ರೋಗಗಳು ಶೀಘ್ರವಾಗಿ ಗುಣಹೊಂದಬೇಕಾದರೆ ಮೊದಲು ಆಹಾರದಲ್ಲಿ ಸ್ವಾವಲಂಬನೆ ಹೊಂದಬೇಕು.

**ಕಾರಣಗಳು :** ಕೃಷಿಯ ಕಡಿಮೆ ಉತ್ಪನ್ನದ ಜೊತೆಗೆ ಅತಿ ಜನಸಂಖ್ಯೆ, ಹಣದ ಪೂರೈಕೆಯಲ್ಲಿ ಹೆಚ್ಚಳ, ಸಕಾಲವಲ್ಲಿ ಬರದಿರುವ ಮಳೆ, ನೀರಾವರಿ ಸೌಲಭ್ಯಗಳ ಕೊರತೆ, ಆಧುನಿಕ ಕೃಷಿ ಪದ್ಧತಿಯ ಅಭಾವ, ಆಹಾರ ಧಾನ್ಯಗಳ ಅಪವ್ಯಯ, ಬಡತನ, ಅಸಮತೂಕದ ಆಹಾರ, ಅಸಮರ್ಥ ಹಾಗೂ ಅಪ್ರಮಾಣಿಕ ಆಡಳಿತ ವರ್ಗ, ಸಾರಿಗೆ ಸೌಕರ್ಯಗಳ ಕೊರತೆ ಇತ್ಯಾದಿ ಕಾರಣಗಳು ಆಹಾರ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿವೆ.

**ಜನಸಂಖ್ಯಾ ಹೆಚ್ಚಳ :** ಆಹಾರ ಸಮಸ್ಯೆ ಏರುತ್ತಿರುವ ಜನಸಂಖ್ಯೆಯ ಒಂದು ಸಂಕೇತ. ಭಾರತದಲ್ಲಿ ಆಹಾರದ ಉತ್ಪಾದನೆ ದ್ವಿಗುಣಗೊಳ್ಳುತ್ತಿರುವ ಸಮಯದಲ್ಲೇ ಜನಸಂಖ್ಯೆಯೂ ದ್ವಿಗುಣಗೊಳ್ಳುತ್ತಿರುವುದರಿಂದ ಆಹಾರದ ಕೊರತೆ ನೀಗದಾಗಿದೆ. ಜನಸಂಖ್ಯಾ ಸ್ಫೋಟದಿಂದಾಗಿ ಭಾರತದಲ್ಲಿ ಹೆಚ್ಚು ಹೆಚ್ಚು ಜನ ಬಡತನದ ಬೇಗೆಗೆ ಸಿಕ್ಕಿ ಹಸಿವಿನಿಂದ ನರಳುತ್ತಿದ್ದಾರೆ. ಇದಕ್ಕೆ ಕಾರಣ ಜನಸಂಖ್ಯೆ ಏರಿದಂತೆಲ್ಲಾ ತಿನ್ನುವವರು ಹೆಚ್ಚಾಗಿ ಉತ್ಪಾದಿಸುವವರು ಕಡಿಮೆಯಾಗುವುದು. ನಮ್ಮ ಜನಸಂಖ್ಯೆಯ ಅರ್ಧದಷ್ಟು 20 ವರ್ಷಗಳಿಗಿಂತಲೂ ಕಡಿಮೆ ವಯಸ್ಸಿನವ

ರಾಗಿದ್ದು, ದೇಶದ ಉತ್ಪಾದನೆಗೆ ಯಾವ ನೆರವನ್ನೂ ನೀಡಲಾರದವರಾಗಿದ್ದಾರೆ. ನಮ್ಮ ಒಟ್ಟು ಜನಸಂಖ್ಯೆಯಲ್ಲಿ ಶೇ. 40 ಭಾಗದಷ್ಟು ಜನರಿಗೆ ಕನಿಷ್ಠ ಆಹಾರ ದೊರೆಯುತ್ತಿಲ್ಲವೆಂದು ಅಂದಾಜು ಮಾಡಲಾಗಿದೆ. ಪೂರೈಕೆಯಾಗುತ್ತಿರುವ ಆಹಾರದಲ್ಲೂ ಪೌಷ್ಟಿಕಾಂಶದ ಕೊರತೆ ಒಂದು ಸಮಸ್ಯೆಯಾಗಿದೆ.

**ಹಣದ ಪೂರೈಕೆಯಲ್ಲಿ ಹೆಚ್ಚಳ :** ಆಹಾರ ವಸ್ತುಗಳ ಅಧಿಕ ಬೇಡಿಕೆಗೆ ಜನರ ಹೆಚ್ಚಿನ ಆದಾಯವೂ ಕಾರಣವಾಗಿದೆ. ಆದಾಯ ಹೆಚ್ಚಾದಾಗ ಜನರು ಹೆಚ್ಚು ವಸ್ತುಗಳನ್ನು ಕೊಳ್ಳಲಾರಂಭಿಸುತ್ತಾರೆ. ಆದರೆ ಅದೇ ಪ್ರಮಾಣದಲ್ಲಿ ವಸ್ತುಗಳ ಉತ್ಪಾದನೆಯಾಗದಿರುವುದರಿಂದ ಬೆಲೆಗಳು ಏರಲಾರಂಬಿಸುತ್ತವೆ. ಸರಕಾರದ ಅಧಿಕ ಬಂಡವಾಳ ಹೂಡುವಿಕೆಯು ಜನರ ಆದಾಯದ ಹೆಚ್ಚಳಕ್ಕೆ ಕಾರಣವಾಗಿದೆ.

**ಬ್ಯಾಂಕುಗಳ ಅಧಿಕ ಸಾಲ ನೀಡುವಿಕೆ :** ಇತ್ತೀಚೆಗೆ ಬ್ಯಾಂಕುಗಳು ಅಧಿಕ ಪ್ರಮಾಣದಲ್ಲಿ ಸಾಲ ನೀಡಲು ಮುಂದೆ ಬಂದಿವೆ. ಈರೀತಿ ಪಡೆದ ಹಣದಿಂದ ಸಾರ್ವಜನಿಕರು ಹೆಚ್ಚು ವಸ್ತುಗಳನ್ನು ಹಾಗೂ ಸೇವೆಗಳನ್ನು ಕೊಳ್ಳಲು ಅಪೇಕ್ಷಿಸುತ್ತಾರೆ. ಲಾಭದ ಆಸೆಯಿಂದ ಸಟ್ಟಾ ವ್ಯಾಪಾರಿಗಳು ಬ್ಯಾಂಕುಗಳಿಂದ ಹಣ ಪಡೆದು ಆಹಾರ ಧಾನ್ಯಗಳನ್ನು ದಾಸ್ತಾನು ಮಾಡಿ ಬೆಲೆ ಹೆಚ್ಚಿಸುತ್ತಾರೆ. ಇದರಿಂದ ಆಹಾರದ ಕೊರತೆ ಉಂಟಾಗುತ್ತದೆ.

**ಆಹಾರ ಧಾನ್ಯಗಳ ಬಚ್ಚಿಡುವಿಕೆ :** ವ್ಯಾಪಾರಸ್ಥರು ಹಾಗೂ ಇತರರು ಬೆಲೆ ಏರುವುದೆಂಬ ಕಾರಣದಿಂದ ಆಹಾರ ಧಾನ್ಯಗಳನ್ನು ಬಚ್ಚಿಡುತ್ತಾರೆ. ಈ ರೀತಿಯ ಕಳ್ಳ ದಾಸ್ತಾನಿನಿಂದ ಬೆಲೆ ಏರಿಕೆಯುಂಟಾಗುವುದಲ್ಲದೆ ಆಹಾರ ಸಮಸ್ಯೆ ಉತ್ಕಟವಾಗುತ್ತದೆ.

**ಕಡಿಮೆ ಉತ್ಪಾದನೆ :** ಬಂಡವಾಳದ ಕೊರತೆ, ಸಣ್ಣ ಹಿಡುವಳಿಗಳು, ಜಾನುವಾರಗಳ ಚಿಂತಾಜನಕ ಪರಿಸ್ಥಿತಿ, ಹಳೆಯ ಉಪಕರಣಗಳ ಬಳಕೆ, ಉತ್ಕೃಷ್ಟ ಬೀಜಗಳನ್ನು ಬಳಸದಿರುವಿಕೆ, ಗೊಬ್ಬರಗಳ ಕೊರತೆ ಇತ್ಯಾದಿ ಕಾರಣಗಳಿಂದ ಭಾರತದಲ್ಲಿ ಕೃಷಿ ಉತ್ಪಾದನೆ ಕುಂಟಿತಗೊಂಡು ಆಹಾರದ ಪೂರೈಕೆ ಕಡಿಮೆಯಾಗಿದೆ.

**ವಾಣಿಜ್ಯ ಬೆಳೆಗಳು :** ಇತ್ತೀಚೆಗೆ ರೈತರು ಲಾಭ ಹೊಂದುವ ಆಸೆಯಿಂದ ಆಹಾರ ಧಾನ್ಯಗಳಿಗೆ ಬದಲಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಆಹಾರದ ಕೊರತೆಗೆ ಇದೂ ಒಂದು ಕಾರಣ.

ಹೀಗೆ ಆಹಾರದ ಬೇಡಿಕೆ ಮತ್ತು ಪೂರೈಕೆಯನ್ನು ನಿರ್ಧರಿಸುವ ಅಂಶಗಳು ಆಹಾರ ಕೊರತೆಗೆ ಮುಖ್ಯ ಕಾರಣಗಳಾಗಿವೆ.

**ಪರಿಹಾರ ಕ್ರಮಗಳು :** ಇಂದು ಆಹಾರ ಸಮಸ್ಯೆ ತಾತ್ಕಾಲಿಕ ಆರ್ಥಿಕ ಮುಗ್ಗಟ್ಟಾಗಿರದೇ, ಶಾಶ್ವತವಾಗಿ ಬೇರೂರಿದ ವ್ಯಾಧಿಯಾಗಿದೆ. ಈ ವ್ಯಾಧಿಯನ್ನು ಪೂರ್ಣವಾಗಿ ಗುಣಪಡಿಸುವುದು ಅಷ್ಟು ಸುಲಭವಲ್ಲ. ಪ್ರೊ. ದಂತವಾಲ್ ಪ್ರಕಾರ "ಈ ವ್ಯಾಧಿಯನ್ನು ಗುಣಪಡಿಸುವ ಕಾರ್ಯಕ್ರಮಗಳು ನಿಯಮಿತ ಕ್ರಮಗಳಾಗಿರಬೇಕೇ ಹೊರತು ಪ್ರದರ್ಶನಾತ್ಮಕ ಸ್ವರೂಪದವುಗಳಾಗಿರಬಾರದು". ಆಹಾರ ಸಮಸ್ಯೆಯನ್ನು ಬಗೆಹರಿಸಲು ಮುಖ್ಯವಾಗಿ ನಾಲ್ಕು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ.

**ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ :** ಆಹಾರ ಸಮಸ್ಯೆಯನ್ನು ಶಾಶ್ವತವಾಗಿ ಬಗೆಹರಿಸಲು ಇರುವ ಏಕೈಕ ಮಾರ್ಗವೆಂದರೆ ಕೃಷಿ ಉತ್ಪಾದನೆ ಹೆಚ್ಚಿಸುವುದು. ಇದನ್ನು ತ್ವರಿತ ವೇಗದಲ್ಲಿ ಸಾಧಿಸಬೇಕಾದರೆ ಕೃಷಿಕರಿಗೆ ಅಗತ್ಯವಾದ ರಾಸಾಯನಿಕ ಗೊಬ್ಬರಗಳು, ಸುಧಾರಿತ ಬೀಜಗಳು, ಆಧುನಿಕ ಯಂತ್ರೋಪಕರಣಗಳು, ನೀರಾವರಿ ಸೌಲಭ್ಯಗಳು, ಸಾರಿಗೆ ಮತ್ತು ಉಗ್ರಾಣ ವ್ಯವಸ್ಥೆಯ ಸೌಲಭ್ಯಗಳನ್ನು ಸಕಾಲದಲ್ಲಿ ಒದಗಿಸಬೇಕು. ಕೃಷಿ ಅಭಿವೃದ್ಧಿಗೆ ಸಹಕಾರ ತಳಹದಿಯಾಗಬೇಕು. ರೈತರು ಹೆಚ್ಚು ಇಳುವರಿ ತಳಿ ಬೆಳೆಗಳನ್ನು ಬೆಳೆಯಬೇಕು.

**ಆಹಾರಧಾನ್ಯಗಳ ಯೋಗ್ಯ ಹಂಚಿಕೆ :** ಇತ್ತೀಚೆಗೆ ಸರಕಾರ ಆಹಾರ ಧಾನ್ಯಗಳ ಯೋಗ್ಯ ಹಂಚಿಕೆಗಾಗಿ ನ್ಯಾಯ ಬೆಲೆ ಅಂಗಡಿಗಳನ್ನು ಮತ್ತು ಸಹಕಾರಿ ಗ್ರಾಹಕ ಸಂಘಗಳನ್ನು ಸ್ಥಾಪಿಸಿದೆ. ಎಲ್ಲಾ ರಾಜ್ಯಗಳಲ್ಲೂ ಆಹಾರ ವಲಯಗಳನ್ನು ಸ್ಥಾಪಿಸಲಾಗಿದೆ. ಆಹಾರ ಧಾನ್ಯಗಳ ಮಾರಾಟದಲ್ಲಿ ಅನ್ಯಾಯ, ಅಕ್ರಮಗಳು ನಡೆಯದಿರುವಂತೆ ಸರಕಾರ ಶಾಸನಗಳನ್ನು, ನಿಯಂತ್ರಣ ಕ್ರಮಗಳನ್ನು ಕಾರ್ಯಗತಗೊಳಿಸಿದೆ. ಹೆಚ್ಚುವರಿ ಆಹಾರ ಧಾನ್ಯಗಳನ್ನು ಉತ್ಪಾದಿಸಿದ ರಾಜ್ಯಗಳಲ್ಲಿ ಆಹಾರ ಧಾನ್ಯಗಳನ್ನು ಸಂಗ್ರಹಿಸಿ, ಕೊರತೆ ಬೀಳುವ ರಾಜ್ಯಗಳಲ್ಲಿ ಹಂಚುವ ಕ್ರಮಗಳನ್ನು ಕಾರ್ಯಗತಗೊಳಿಸಲು ಸರಕಾರ "ಆಹಾರ ಕಾರ್ಪೊರೇಷನ್" ಸ್ಥಾಪಿಸಿದೆ.

**ಆಹಾರಧಾನ್ಯಗಳ ಬೆಲೆಯಲ್ಲಿ ಸ್ಥಿರತೆ :** ಬೆಲೆಗಳ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸರಕಾರ ಆಹಾರಧಾನ್ಯಗಳನ್ನು ದಾಸ್ತಾನು ಮಾಡಿ ಅಭಾವ ಪರಿಸ್ಥಿತಿಯೊದಗಿದಾಗ ಅವುಗಳ ಯೋಗ್ಯ ವಿತರಣೆಯನ್ನು ಕೈಗೊಳ್ಳುತ್ತದೆ. ಬೆಲೆಗಳು ಇಳಿದಾಗ ಸರಕಾರ ಆಹಾರ ಧಾನ್ಯಗಳನ್ನು ನಿಗಧಿಪಡಿಸಿದ ಕನಿಷ್ಠ ಬೆಲೆಗೆ ಕೊಂಡು ಬೆಲೆಗಳ ಇಳಿತವನ್ನು ತಡೆಗಟ್ಟುತ್ತದೆ. ಬೆಲೆಗಳು ಹೆಚ್ಚಿಸಿದಾಗ ಸರಕಾರ ತಾನು ಸಂಗ್ರಹಿಸಿದ ಆಹಾರಧಾನ್ಯಗಳನ್ನು ಮಾರಾಟ ಮಾಡುತ್ತದೆ. ಇದರಿಂದ ಮಾರುಕಟ್ಟೆಯಲ್ಲಿ ಆಹಾರಧಾನ್ಯಗಳ ಪೂರೈಕೆ ಹೆಚ್ಚಾಗಿ ಬೆಲೆಗಳು ಇಳಿದು ಸ್ಥಿರತೆ ಕಾಯ್ದುಕೊಳ್ಳಲು ಅನುಕೂಲವಾಗುತ್ತದೆ.

ಕೃಷಿಕರಿಗೆ ಪ್ರೋತ್ಸಾಹ ನೀಡಿಕೆ : ಕೃಷಿ ಹುಟ್ಟುವಳಿಗೆ ಯೋಗ್ಯ ಬೆಲೆ ಸಿಗುವಂತೆ ಮಾಡುವುದು ಆಹಾರ ನೀತಿಯ ಮತ್ತೊಂದು ಗುರಿಯಾಗಿದೆ. ಈ ದೃಷ್ಟಿಯಿಂದ ಸರಕಾರ ಆಹಾರ ಧಾನ್ಯಗಳ ಬೆಲೆಯನ್ನು ನಿಗದಿಪಡಿಸಲು "ಕೃಷಿ ಹುಟ್ಟುವಳಿ ಬೆಲೆ ಸಮಿತಿ" ಯನ್ನು ರಚಿಸಿದೆ. ಈ ಸಮಿತಿಯು ಕೃಷಿ ಹುಟ್ಟುವಳಿಗಳ ಕನಿಷ್ಠ ಬೆಲೆ, ಕೊಳ್ಳುವ ಬೆಲೆ ಮತ್ತು ಗರಿಷ್ಠ ಬೆಲೆಯನ್ನು ನಿಗದಿಪಡಿಸುತ್ತದೆ. ಇದಲ್ಲದೆ ಸರಕಾರ ಉತ್ಪಾದಕರಿಂದ ಎಲ್ಲಾ ಕೃಷಿ ಉತ್ಪನ್ನಗಳನ್ನು ನಿಗದಿಮಾಡಿದ ಬೆಲೆಗೆ ಕೊಳ್ಳುವುದಾಗಿ ಭರವಸೆ ನೀಡಿದೆ. ಇದರಿಂದ ಕೃಷಿಕರು ಉತ್ಸಾಹದಿಂದ ಉತ್ಪಾದನಾ ಚಟುವಟಿಕೆಗಳನ್ನು ಕೈಗೊಳ್ಳುವುದು ಸಾಧ್ಯವಾಗುತ್ತಿದೆ.

ಹೀಗೆ ಆಹಾರ ಸಮಸ್ಯೆಯ ನಿವಾರಣೆಗೆ ಸರಕಾರ ಹಲವಾರು ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿದೆ. ಇತ್ತೀಚಿಗೆ ಆಹಾರದ ಕೊರತೆಯನ್ನು ಹೋಗಲಾಡಿಸುವ ದೃಷ್ಟಿಯಿಂದ ಸರಕಾರ ಹೊಸ ಆಹಾರದ ಯೋಜನೆಯನ್ನು ರೂಪಿಸಿದೆ. ತೀವ್ರ ಸಾಗುವಳಿ ಪದ್ಧತಿಯನ್ನು ಹೆಚ್ಚಿಸುವುದು ಇದರ ಮುಖ್ಯ ಧ್ಯೇಯ.

---

ಆಹಾರ ಪಾನೀಯಗಳ ಸೇವನೆ ಸಂದರ್ಭದಲ್ಲಿ ನುಂಗುವುದು ಇಲ್ಲವೇ ಗುಟುಕರಿಸುವುದು ಮಾಡಿದಾಗ ನಾಲಿಗೆಯನ್ನು ಹಿಂದಕ್ಕೆ ಎಳೆದುಕೊಳ್ಳುತ್ತೇವೆ. ಆ ಸಮಯದಲ್ಲಿ 'ಗ್ಲಾಟಿಸ್' ಎಂಬ ಕವಾಟ ಉಸಿರುನಾಳವನ್ನು ಬಿಗಿಯಾಗಿ ಮುಚ್ಚಿಕೊಳ್ಳುತ್ತದೆ. ನುಂಗುವುದಾಗಲಿ, ಗುಟುಕರಿಸುವುದಾಗಲಿ ಮುಗಿದಾಗ ಉಸಿರುನಾಳದ ಬಾಯಿ ಮತ್ತೆ ತೆರೆಯುತ್ತದೆ. ಈ ಕ್ರಿಯೆ ನಮ್ಮ ಹಿಡಿತದಲ್ಲಿ ಇಲ್ಲದೆ, ನಮ್ಮ ಅರಿವಿಗೆ ಬರದೆ ಸಾಗುತ್ತದೆ. ಒಂದು ವೇಳೆ ಗ್ಲಾಟಿಸ್ ಬಿಗಿಯಾಗಿ ಮುಚ್ಚದೆ ಆಹಾರ ಪಾನೀಯ ಶ್ವಾಸನಾಳಕ್ಕೆ ಹೋದಾಗ ನುಲುಗುಟ್ಟಿ ಕೆಮ್ಮು ಆರಂಭವಾಗುತ್ತದೆ. ಒಂದೊಂದು ಸಾರಿ ಮೂಗಿನ ಹೊಳ್ಳೆಗಳಿಗೂ ನುಗ್ಗಿ ಸೀನು ಬರಬಹುದು. ಹೀಗೆ ಆಹಾರ ಪಾನೀಯ ಉಸಿರು ಮಾರ್ಗದ ಸಂಪರ್ಕ ಪಡೆದು ಕೆಮ್ಮು-ಸೀನು ತಂದ ಸಂದರ್ಭವನ್ನ 'ನೆತ್ತಿಹತ್ತಬುಡ್ತು' ಎನ್ನುತ್ತಾರೆ.

ಜೇನು, ಕಾಕಂಬಿ ಮುಂತಾದ ಗಟ್ಟಿ ಪಾನೀಯಗಳನ್ನು ಅಂತರಳನಾಗಿ ಸೇವಿಸಬಾರದು. ಒಂದು ವೇಳೆ ಇಂತಹ ದ್ರವ ಉಸಿರುನಾಳಕ್ಕೆ ಸೇರಿಬಿಟ್ಟರೆ ಹೊರಬರುವುದು ಕಷ್ಟ. ಹೆಚ್ಚು ಕೆಮ್ಮಿದರೂ ಕೆಲವು ವೇಳೆ ಈ ದ್ರವ ಶ್ವಾಸಕೋಶಕ್ಕೆ ಇಳಿದು 'ನ್ಯುಮೋನಿಯ' ಉಂಟುಮಾಡಬಹುದು.

—ವೈದ್ಯ ತರಂಗಿಣಿ

# 'ಅಸ್ತಂಗತ ವಿದ್ವಾನ್ ಡಿ. ಸಿದ್ಧಲಿಂಗಯ್ಯನವರ ಒಂದು ನೆನಪು'

**—ವಿದ್ವಾನ್ ಎಂ. ಶಿವಕುಮಾರ ಸ್ವಾಮಿ**



ಜನನ : 16–7–1937
ಮರಣ : 14–7–1982

ದಿನಾಂಕ 14–7–82 ರ ಬುಧವಾರ ಮಧ್ಯಾಹ್ನ ಸುಮಾರು 3-30 ರ ಸಮಯದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆಯಲ್ಲಿ ಶಕ್ತಿ ವಿಶಿಷ್ಟಾದ್ವೈತ ವೇದಾಂತ ಪ್ರಾಧ್ಯಾಪಕರಾಗಿದ್ದ ಮೆಳೇಹಳ್ಳಿಯ ವಿದ್ವಾನ್ ಡಿ. ಸಿದ್ಧಲಿಂಗಯ್ಯನವರು ತಮ್ಮ ನಲವತ್ತೈದನೇ ವಯಸ್ಸಿನಲ್ಲಿ ನಿಧನರಾದರೆಂಬ ಸುದ್ದಿ ಕೇಳಿ ನಂಬಲನರ್ಹವೆಂದರಿತವರೇ ಬಹುಮಂದಿ. ಕಾರಣ ಶಾರೀರಿಕ ಏರುಪೇರುಗಳಿಲ್ಲದ, ದೃಢಕಾಯರಾಗಿ ಕಟ್ಟುಮಸ್ತಾಗಿದ್ದ ವ್ಯಕ್ತಿಯ ಈ ಅನಿರೀಕ್ಷಿತ ಸಾವಿನ ಸುದ್ದಿ ನಿಜಕ್ಕೂ ಶ್ರೀ ಕ್ಷೇತ್ರದ ಪೂಜ್ಯರಾದಿಯಾಗಿ ಅನೇಕ ಮಂದಿ ಆಶ್ಚರ್ಯಚಕಿತರಾಗುವಂತೆ ಮಾಡಿತು. ಆದರೆ ಇದು ಸ್ಪಟಿಕ ಸ್ಪಷ್ಟತೆಯಷ್ಟೇ ಸತ್ಯವೆಂದರಿತಾಗ ಎಲ್ಲರೂ ಇವರ ಈ ಅಕಾಲಿಕ ಮರಣದ ದುಃಖದಲ್ಲಿ ಾಲ್ಗೊಳ್ಳುವಂತೆಮಾಡಿ " ಯದಚಿಂತ್ಯಂತು ತದ್ದೈವಂ ಭೂತೇಷ್ವಪಿ ಸಹನ್ಯತೇ " ಚಿಂತ್ಯವಾದುದು ದೈವ ಘಟನೆಯೆಂದರಿತು ಸಮಾಧಾನಪಡುವಂತೆ ಮಾಡಿತ್ತು ವಿಧಿ.

ಇಷ್ಟೊಂದು ಜನತೆಯ ಮನಸ್ಸನ್ನು ದುಃಖದಲ್ಲಿ ಮುಳುಗುವಂತೆ ಮಾಡಿದ್ದ ವರ ವ್ಯಕ್ತಿತ್ವದ ವಿವಿಧ ಮುಖಗಳ ಪರಿಚಯವನ್ನು ಅತೀ ಹತ್ತಿರದಿಂದ ನೋಡಿದ್ದ

ಅನೇಕರಿಗೆ ಅತೀವ ದುಃಖಉನ್ಮಳಿಸಲು ಇವರ ಕಾರ್ಯತತ್ಪರತೆ–ಸ್ನೇಹತತ್ಪರತೆ, ರ
ಕತೆ–ಮಾತಿನ ನಿರಾಡಂಬರ ಇವು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದುದೇ ಕಾರಣ
ಜತೆಗೆ 'ಸಜ್ಜನರೆನಿಸಿದ್ದ ವ್ಯಕ್ತಿಯ ಪ್ರತಿ ವಿದ್ಯಮಾನವೂ ಪರಿಶೀಲನಾರ್ಹವಾದದ್ದೇ

ಕಡುಬಡತನದಲ್ಲಿ ಹುಟ್ಟಿ ಬೆಳೆದ ದಿವಂಗತ ಸಿದ್ದಲಿಂಗಯ್ಯನವರಿಗೆ ಶ್ರೀ
ಸಿದ್ಧಗಂಗಾ ಕ್ಷೇತ್ರದ ಆಸರೆ, ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಆಶೀ
ರ್ವಾದದ ಫಲದಿಂದಾಗಿ ಯಾವುದೇ ಅಡಚಣೆ ಇಲ್ಲದೆ ವಿದ್ಯಾಭ್ಯಾಸಕ್ಕೆ ತಕ್ಕ
ಪ್ರೋತ್ಸಾಹ ದೊರೆಯಿತು. ಪಕ್ಕದ ಮೆಳೆಹಳ್ಳಿಯಿಂದ ಬಂದ ಇವರಿಗೆ ಪೂಜ್ಯ
ಶ್ರೀಗಳವರಿಂದ ದೊರೆತ ಅನುಗ್ರಹದ ಫಲವಾಗಿ ವಿದ್ಯಾರ್ಥಿದೆಸೆಯಲ್ಲಿನ ಎಲ್ಲಾ ಅವ
ಕಾಶಗಳನ್ನೂ ಉಪಯೋಗಿಸಿಕೊಂಡು ಉತ್ತಮ ವಿದ್ಯಾರ್ಥಿಯೆನಿಸಿಕೊಂಡು ಇವರ
ಸಂಸ್ಥೆಯ ಎಲ್ಲ ಹಿರಿಯರ ಮೆಚ್ಚುಗೆಗೆ ಪಾತ್ರರಾಗಿ ಪ್ರತಿಭಾಶಾಲಿಗಳೆಂಬ ಕೀರ್ತಿ
ಗಳಿಸಿದ್ದರು.

'ಮರಣಂ ಪ್ರಕೃತಿಃ ಶರೀರಿಣಾಂ'—ಎಂಬ ಕಾಳಿದಾಸನ ಉಕ್ತಿಯಂತೆ ಹುಟ್ಟಿ
ದವರೆಲ್ಲರೂ ಸಾವಿಗೆ ತುತ್ತಾಗುವುದು ಸಹಜ. ಆದರೆ ಅದಕ್ಕೆ ಮೊದಲು ಅಶಾಶ್ವತ
ವಾದ ಜೀವಿತಕಾಲದಲ್ಲಿ ಶಾಶ್ವತವೆನಿಸಬಲ್ಲ ಕೃತಿಗಳನ್ನು ಮಾಡಿ ತೋರಿಸುವ ವ್ಯಕ್ತಿ
ಗಳು ವಿರಳ. ಅಂತಹವರನ್ನು ಶರೀರ ಹೋದರೂ ಜೀವಿಸಿದ್ದಾರೆಂದು ನಾವು ಭಾವಿಸು
ತ್ತೇವೆ. ಹಾಗೆಯೇ ಅತಿವಿರಳಜೀವನವನ್ನು ನಡೆಸಿ ಪಾರ್ಥಿವದೃಷ್ಟಿಯಿಂದ ಈ ಲೋಕ
ವನ್ನು ಬಿಟ್ಟ ದಿವಂಗತರ ಬಹುಮುಖ ವ್ಯಕ್ತಿತ್ವವೇ ಅವರನ್ನು ಮರೆಯದಿರಲು
ಕಾರಣವಾಗಿದೆ.

ಕಠೋಪನಿಷತ್ತಿನಿಂದ ಹಿಡಿದು–ಕಾಡುಹರಟೆಯವರೆವಿಗೂ, ಗೀತೆಯ ಅಲೌ
ಕಿಕ ಅಂತರಂಗವನ್ನು ವಿವರಿಸುವುದರಿಂದ ಹಿಡಿದು ಅಂತಃಪುರಗೀತೆಯ ವಿಲಾಸಿನಿಯ
ಬೆಡಗುಬಿನ್ನಾಣಗಳನ್ನು ಬಣ್ಣಿಸುವವರೆಗೂ, ಕೃಷಿಕತೆಯಿಂದ ಹಿಡಿದು–ಪುರಾಣ
ಇತಿಹಾಸಾದಿ ವರ್ಣನೆಯವರೆಗೂ, ಲೋಕನೀತಿ, ಧರ್ಮದಿಂದ ಹಿಡಿದು–ಸಾಹಿತ್ಯ
ರಾಜಕಾರಣದವರೆಗೂ, ರಾಮಾಯಣ–ಮಹಾಭಾರತಗಳ ಸನ್ನಿವೇಶಗಳಿಂದ ಹಿಡಿದು
ಪ್ರಸ್ತುತದಿನದ ಸಾಮಾಜಿಕ ಎಡರು–ತೊಡರುಗಳವರೆವಿಗೂ ಲಕ್ಷ್ಮೀಶನ ಜೈಮಿನಿ
ಭಾರತದಿಂದ–ರಾಘವಾಂಕನ ಹರಿಶ್ಚಂದ್ರ ಕಾವ್ಯದವರೆವಿಗೂ, ಹಲವಾರು ರೀತಿ
ಸಂದರ್ಭಕ್ಕೆ ಅನುಸಾರವಾಗಿ ಓತಪ್ರೋತವಾಗಿ ಹರಿಯುತ್ತಿದ್ದ ಅವರ ಭಾಷಾ
ಪ್ರೌಢಿಮೆ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದ್ದಿತು.

ಮುಟ್ಟಿದರೆ ರಕ್ತ ಚಿಮ್ಮುವಂತಿದ್ದ ದೇಹ, ಸಶಕ್ತಬಾಹುಗಳು ನೇರ–ನಿಶ್ಚಲನ
ದುಂಡುಮುಖ ಆರ್ಥಿಕ, ಧಾರ್ಮಿಕ, ಸಾಮಾಜಿಕ ಅಖಾಡಗಳಲ್ಲಿ ಮೈ ಒಡ್ಡಿ
ಜಟ್ಟಿ–ಪೆಟ್ಟುತಿಂದು ಪಳಗಿದ್ದ ಪೈಲ್ವಾನ.

ಸಿದ್ಧಗಂ

"He who known not and knows not he knows not is a fool, shun him. He who knows and knows he knows is a teacher." (ಏನನ್ನೂ ತಿಳಿಯದೆ, ತನಗೆ ತಿಳಿಯದು ಎಂದು ತಿಳಿಯದಿರುವವನು ಮೂರ್ಖ, ಅವನನ್ನು ದೂರದಲ್ಲಿಡಬೇಕು. ಅರಿವನ್ನು ಪಡೆದಿದ್ದು ಆ ಅರಿವಿನ ಮಿತಿಯನ್ನೂ ತಿಳಿದಿರುವವನು ಒಳ್ಳೆಯ ಉಪಾಧ್ಯಾಯ; ಅವನನ್ನು ಅನುಸರಿಸಬೇಕು.) ಇಂತಹ ಒಬ್ಬ ಒಳ್ಳೆಯ ಉಪಾಧ್ಯಾಯನೆನಿಸಿಕೊಂಡಿದ್ದ ಅವರ ವೃತ್ತಿ ಕೇವಲ ಉದರಪೋಷಣೆಗೆ ಮಾತ್ರವೇ ಸೀಮಿತವಾಗಿರಲಿಲ್ಲ. ಬದುಕಿನ ಆನಂದಕ್ಕಾಗಿ ಸೊಗಸಿಗಾಗಿ ಜತೆಗೆ ಅವರ ಪಾಠವೆಂದರೆ ಬರಿಯ ಪ್ರತಿಪದಾರ್ಥ ಹೇಳುವುದಲ್ಲ. ಅದರಲ್ಲಿ ಒಂದು ಜೀವನವಿತ್ತು, ಒಂದು ಧ್ಯೇಯವಿತ್ತು, ಒಂದು ಸಿದ್ಧಿ ಇತ್ತು. ಒಳಿತನ್ನ ಮಾಡುವ ಕಿರಿಯರಿಗೆ ಸ್ಫೂರ್ತಿನೀಡಿ, ಪರಿಸರದ ಆತ್ಮೀಯರಿಗೆ ಮಾರ್ಗದರ್ಶಿತ್ವ ನೀಡುತ್ತಿದ್ದ ಅವರ ಶಿಷ್ಯರೆನಿಸಿಕೊಳ್ಳುವುದಕ್ಕೆ ಯಾರಾದರೂ ಹೆಮ್ಮೆ ಪಡಬೇಕು. 'ಗುರುವೋ ವಿರಲಾಲೋಕೇ ಶಿಷ್ಯ ಚಿತ್ತಾಪಹಾರಕಾಃ' ಎಂಬೀ ಉಕ್ತಿಗೆ ಅರ್ಹರೆನಿಸಿದ್ದವರು. ಸಿರಿಯೋಳ್ ಸೈರಣೆ, ಕಷ್ಟದೊಳುರು ಧೈರ್ಯಂ, ಜಸದೊಳಾಸೆ, ಶಾಸ್ತ್ರದೊಳೊಲವುಂ, ಸಭೆಯೋಳ್ ಪಿರಿದಿಹವಾಕ್ಪಟುತೆ, ಇಂತಹ ನೈಜ ಮಾರ್ಗದಲ್ಲೀ ಅಡಿಇಟ್ಟ ಅವರ ಕುಗ್ಗದ ಧ್ವನಿ ಪ್ರತಿಪಾದಿಸಬಯಸುವ ಅಂಶಗಳನ್ನು ಹೇಳುವಾಗ ತಾಳುತ್ತಿದ್ದ ನಿಲುವು, ಬಾಹ್ಯಾಕ್ರೋಶದಂತೆ ಕಾಣಬಂದರೂ ಹಿಡಿದ ಪಟ್ಟಿನಲ್ಲಿ ಸೋಲುವ ಮುಖಭಾವ ಅವರದಲ್ಲ.

ಒಮ್ಮೆ ನೋಡಿದವರನ್ನು ಎಂದೂ ಮರೆಯದ ಮೈತ್ರಿ, ವಿಶ್ವಾಸ, ಸ್ನೇಹಪರತೆ, ಆತ್ಮೀಯತೆ, ಜೀವನದಲ್ಲೂ—ಸ್ನೇಹದಲ್ಲೂ ಎಂದೂ ಆಸ್ಥೆಯನ್ನು ಕಳೆದುಕೊಂಡವರಲ್ಲ. ಇವರಲ್ಲಿದ್ದ ಲವಲವಿಕೆಯ ಹಾಸ್ಯ ಅವರ ಜೀವನದ ಹೊನಬೆಳಗು.

ಮಾನವನ ಮನದ ನೋವಿಗೆ ಸೊಪ್ಪುಹಾಕದಿದ್ದರೂ ಸತ್ಯಕ್ಕೆ ಅಂಜುತ್ತಿದ್ದರು. ನೇರ—ನಿಷ್ಠುರವಚನಗಳಿಗೆ ಮೊದಲು ಮಾರುಹೋಗುತ್ತಿದ್ದರಲ್ಲದೆ, ಎದುರಾಳಿಯ ಮಾತಿನ ಬೆದರಿಕೆಗಂಜಿ ಇಲ್ಲದ್ದನ್ನು ಉಂಟೆಂದೊ, ಇದ್ದುದನ್ನು ಇಲ್ಲವೆಂದೂ ಒಪ್ಪಿಕೊಳ್ಳುವ ಗುಂಪಿನವರಾಗಿರದೆ, "ನ್ಯಾಯ ನಿಷ್ಠುರಿ ಶರಣನಾರಿಗೂ ಅಂಜುವನಲ್ಲ" ಎಂಬ ಬಸವಣ್ಣನವರ ಮಾತಿನ ಮೇಲೆ ಬೆಳಕುಚೆಲ್ಲಲು ಹಿಂದೆಮುಂದೆ ನೋಡಿದವರಲ್ಲ. 'ಹಂಡೆ ಪಾಯಸ' ವೆಂದಕೂಡಲೇ ಬಹುಮಂದಿಯ ನೆನಪಿಗೆ ಬರುತ್ತಿದ್ದ ಈ ವ್ಯಕ್ತಿ ಜೀವನದುದ್ದಕ್ಕೂ ಅನುಭವಿಸಿದ ಸಾಂಸಾರಿಕ ನೋವುನಲಿವುಗಳನ್ನು ಸಮಭಾವ ದೃಷ್ಟಿಯಿಂದ ನೋಡಿದ್ದವರು.

1982

ಜೀವನದ ಅನೇಕ ಮುಖಗಳೊಡನೆ ಸಾಮರಸ್ಯ ಹೊಂದಿದ್ದ ಇವರಿಗೆ ನಾಟಕ ಕಲೆಯಲ್ಲೂ ವಿಶೇಷ ಆಸಕ್ತಿ ಇದ್ದು ಒಬ್ಬ ಕಲಾವಿದನಾಗಿ, ಹಿರಿಯ ನಾಟಕ ಕಲಾ ವಿದರನೇಕರ ಬಗ್ಗೆ ತಿಳಿದುಕೊಂಡಿದ್ದು, ಸ್ವಯಂ ನಟರಾಗಿ ಅನೇಕ ಪಾತ್ರಗಳಲ್ಲಿ ವಿರಾಜಿಸಿದ್ದವರು. ಅವುಗಳಲ್ಲಿ ಭಕ್ತ ಮಾರ್ಕಂಡೇಯದಲ್ಲಿನ—ಯಮ, ಕರಾಳಿ, ಅಗ್ನಿಮುಖನಾಗಿ, ಶಿವಜಲಂಧರದ—ಜಲಂಧರನಾಗಿ, ಸತ್ಯಹರಿಶ್ಚಂದ್ರದಲ್ಲಿನ—ಹರಿಶ್ಚಂದ್ರ/, ವಿಶ್ವಾಮಿತ್ರನಾಗಿ, ರಾಮಾಯಣದಲ್ಲಿನ ಆಂಜನೇಯನಾಗಿ, ದಕ್ಷಯಜ್ಞ ದಲ್ಲಿನ ದಕ್ಷನಾಗಿ, ದೇವದಾಸಿ ನಾಟಕದ—ನಾಜೂಕಯ್ಯನಾಗಿ, ಎಚ್ಚಮನಾಯಕ ದಲ್ಲಿನ–ಎಚ್ಚಮ್ಮನಾಯಕನಾಗಿ, ಮಹಾಕವಿ ಕಾಳಿದಾಸನ ಶಾಕುಂತಲದಲ್ಲಿ ದುಷ್ಯಂತ ನಾಗಿ, ಮಹಾಕವಿ ಭಾಸನ ಊರುಭಂಗ, ಮಧ್ಯಮವ್ಯಾಯೋಗ ನಾಟಕಗಳಲ್ಲಿ ದುರ್ಯೋಧನ, ಭೀಮನಾಗಿ, ಬಹುಶ್ರುತರಾಗಿದ್ದವರು. ಎಲ್ಲಕ್ಕಿಂತ ಮಿಗಿಲಾಗಿ ಶ್ರೀ ಸಿದ್ಧಗಂಗಾ ಕಲಾವೃಂದದವರ ' ಜಗಜ್ಯೋತಿ ಬಸವೇಶ್ವರ 'ದಲ್ಲಿನ " ಬಸವಣ್ಣ "ನ ಪಾತ್ರಧಾರಿಯಾಗಿ ಅಭೂತಪೂರ್ವ ಹೆಸರುಗಳಿಸಿಕ್ಕೊಂಡಿದ್ದವರು. ಇವರು ವಹಿಸಿದ್ದ ಪಾತ್ರಗಳನ್ನು ನೋಡಿದ್ದ ಯಾವ ಪ್ರೇಕ್ಷಕನೂ ಇವರ ಜೀವಂತ ಪಾತ್ರವನ್ನು ಮರೆಯಲಾರ. ನೋಡಿದ್ದ ನಾಟಕವನ್ನೇ ಮತ್ತೆ ಮತ್ತೆ ನೋಡುವಂತೆ ಪ್ರೇರೇಪಿಸಿದ್ದ ಬಸವೇಶ್ವರ ನಾಟಕದಲ್ಲಿ ಇವರ ಪಾತ್ರದ ಒಂದು ದೃಶ್ಯವಂತೂ [ನಿಯೋಗಗೋಷ್ಠಿ] ನಿಜಕ್ಕೂ ಅವಿಸ್ಮರಣೀಯ, ಅನಿರ್ವಚನೀಯ.

ಕೊನೆಯದಾಗಿ, ಶ್ರೀ ಕ್ಷೇತ್ರದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸಂಪೂರ್ಣ ಕೃಪಾಶೀರ್ವಾದಗಳಿಗೆ ಪಾತ್ರರಾಗಿದ್ದು ಪೂಜ್ಯರ ಬಗ್ಗೆ ಹೊಂದಿದ್ದ ತಮ್ಮದೇ ಆದ ಅವರ ಈ ಮಾತುಗಳನ್ನು ಗಮನಿಸಬಹುದಾಗಿದೆ.

ಸ್ವಾಮಿಗಳು ಯಾರಿಗಾಗಿ ದಿನಂಪ್ರತಿ ಇಷ್ಟೊಂದು ಕಷ್ಟಪಡಬೇಕು? ಇಷ್ಟೊಂದು ಅವಿಶ್ರಾಂತ ದುಡಿಮೆಯಲ್ಲೇ ಮಗ್ನರಾಗಿರುವ ಅವರು ತಮ್ಮ ವೈಯಕ್ತಿಕ, ದೈಹಿಕ ಹಿತವನ್ನು ಕಡೆಗಣಿಸಿ ದುಡಿಯುತ್ತಿರುವುದರ ಔಚಿತ್ಯವೇನು? ಪ್ರಾಥಃಕಾಲ 2½ ಗಂಟೆಯಿಂದ 10½ ಗಂಟೆಯವರೆವಿಗೂ ಬಿಡುವಿಲ್ಲದ ಅವರ ದಿನನಿತ್ಯದ ಈ ತಿನಚರಿ ಇಳಿವಯಸ್ಸಿನಲ್ಲಿ ದೈಹಿಕವಾಗಿ ಪರಿಣಾಮ ಉಂಟುಮಾಡುವುದಿಲ್ಲವೆ? ಇಂತಹವರು ನಮಗೆ ಬೇರೆಲ್ಲಿ ದೊರೆತಾರು? ಅವರ ಈ ಅವಿಶ್ರಾಂತ ದುಡಿಮೆಯಿಂದಾಗುತ್ತಿರುವ ದೆಹೈಕ ಹಾನಿ, ಪ್ರಕೃತಿಧರ್ಮದಿಂದ ಕುಗ್ಗುತ್ತಿರುವ ಅವರ ಶಾರೀರಕ ದುರ್ಬಲತೆ ಇವನ್ನೆಲ್ಲಾ ಗಮನಿಸಿದಾಗ ಇಂತಹ ಘನತೆವೆತ್ತ ಶರಣರನ್ನು ಬುತ್ತಿ ಕಟ್ಟಿಕೊಂಡು ಇಡೀ ದೇಶವನ್ನೇ ಸುತ್ತಿದರೂ ದೊರೆಯುತ್ತಾರಾ? (ಈ ಮೇಲಿನ ಮಾತುಗಳಲ್ಲಿ ಯಾವುದೇ ಪದಗಳನ್ನು ಹೊಸದಾಗಿ ಸೇರಿಸದೆ, ಅವರೇ ಹೇಳಿದ್ದ ಒಂದು ಪದವನ್ನೂ

ಬಿಡದೆ, ಜುಲೈ 11 ನೇ ಭಾನುವಾರ ಈ ಲೇಖಕರೊಡನೆ ಮಾತನಾಡಿದ್ದ ನುಡಿಗಳ ಲ್ಲಿ ಉದಹರಿಸಿದ್ದೇನೆ) ಅಂದಮೇಲೆ ಪೂಜ್ಯರ ಬಗ್ಗೆ ಹಾಗೂ ಸಂಸ್ಥೆಯ ಬಗ್ಗೆ ಅವರಿಗಿದ್ದ ಅಂತರಿಕ ಕಳಕಳಿ ನಿಜಕ್ಕೂ ಮೆಚ್ಚುವಂತಹುದೇ.

ಒಟ್ಟಿನಲ್ಲಿ ಆಳಿನಿಂದ ಹಿಡಿದು ಅರಸನವರೆಗೆ ವ್ಯವಹಾರಿಕ ಕುಶಲತೆ; ಕೂಲಿಯಿಂದ ಹಿಡಿದು ಕುಬೇರನವರೆಗೆ ಸಾಮಿಪ್ಯತೆ; ಬೀಗದ ಕೈನಿಂದ-ಟೆಲಿವಿಷನ್‌ವರೆವಿಗೆ ದೃಷ್ಟಾಂತತೆ; ಆಟದ ಸಾಮಾನುಗಳಿಂದ ಹಿಡದು ಅಂತರಿಕ್ಷದವರೆವಿಗೆ ಉದಹರಿಸಬಲ್ಲ ವ್ಯಕ್ತಿತ್ವದ ಶಕ್ತಿಯಾಗಿ ಜೀವನದ ಏರು-ಪೇರುಗಳನ್ನು ಲೀಲಾಜಾಲವಾಗಿ ಯಶಸ್ವಿಯನ್ನಾಗಿಸಿಕೊಂಡಿದ್ದ, ವ್ಯಾಕರಣಶಾಸ್ತ್ರದಲ್ಲಿನ ಶಬ್ದಶುದ್ಧಿ, ಅಲಂಕಾರ ಶಾಸ್ತ್ರದಲ್ಲಿನ ರಸಿಕತೆ, ವೇದಾಂತ ಶಾಸ್ತ್ರದ ನಿರ್ಮಲಚಿತ್ತ, ಇವು ಮೂರೂ ಶಾಸ್ತ್ರಗಳ ಅನುಭಾವಿ, ಪ್ರಾಧ್ಯಾಪಕ ಇನ್ನಿಲ್ಲ.

ಪರಗುಣ ಶ್ರೀಕರ ಮುದಧಿಂ ಕೃತ್ವಾ ತತ್ರೈವ ಖೇಲದ್ಭ್ಯಃ ।
ಅಜ್ಞಾತಮತ್ಸರೇಭ್ಯಃ ತೇಭ್ಯಃ ಸದ್ಭ್ಯೋನಮೋಸ್ತುವಿದ್ವಧ್ಯಭಃ ॥

ಅಸೂಯೆಯನ್ನರಿಯದ ವಿದ್ವಾಂಸರು, ಸಜ್ಜನರು, ನಿಜಕ್ಕೂ ವಂದ್ಯರು, ಅವರಿಗೆ ನಮಸ್ಕಾರ.

---

## ಯೋಗ

ನದಿಯ ನೀರು ವ್ಯರ್ಥವಾಗಿ ಸಮುದಕ್ಕೆ ಹೋಗಿ ಸೇರುತ್ತಿರುತ್ತದೆ. ಅದಕ್ಕೆ ಅಣೆಕಟ್ಟು ಹಾಕಿ ನೀರನ್ನು ಜಮೀನಿನ ಕಡೆ ತಿರುಗಿಸಿ ಪೈರಿಗೆ ನೀರು ಕೊಟ್ಟಾಗ ಸಮೃದ್ಧಿ ಬೆಳೆ. ಅದೇ ರೀತಿ ಮನಸ್ಸಿನ ಮಹಾಶಕ್ತಿ ಪ್ರಾಪಂಚಿಕ ವಿಷಯಗಳ ಕಡೆ (ರಾಗದ್ವೇಷಗಳ ಕಡೆ) ವ್ಯರ್ಥವಾಗಿ ಹೋಗದಂತೆ ಅದನ್ನು ತಡೆದು ಪರಮಾತ್ಮನ ಕಡೆ ತಿರುಗಿಸುವುದೇ ಯೋಗ. 'ಯೋಗಃ ಚಿತ್ತವೃತ್ತಿ ನಿರೋಧಃ' ಮನಸ್ಸು ವಿಷಯ ಚಿಂತನೆಗಳ ಕಡೆ ಇದ್ದರೆ, ಕಾಮ-ಕ್ರೋಧಗಳ ಆಗರವಾಗಿ ಅಲ್ಲೋಲ - ಕಲ್ಲೋಲವಾಗಿರುತ್ತದೆ. ಅದೇ ಮನಸ್ಸು ಪರಮಾತ್ಮನ ಚಿಂತನೆಯ ಕಡೆ ಇದ್ದರೆ ಶುದ್ಧವಾಗುತ್ತದೆ. ಪ್ರಾಪಂಚಿಕ ದುಃಖಗಳಿಂದ ಪಾರಾಗಬೇಕಾದರೆ ಚಿತ್ತವೃತ್ತಿ ನಿರೋಧವೇ ಏಕೈಕ ಮಾರ್ಗ. ಅದಕ್ಕಾಗಿ ದಾರಿಯೇ ಯೋಗ.

—ಶ್ರೀ ಮುರುಘರಾಜೇಂದ್ರ ಸ್ವಾಮೀಜಿ, ಚಿತ್ರದುರ್ಗ

---

# ಶಿಕ್ಷಣದ ಭವ್ಯ ಪರಂಪರೆ : ನಾಲಂದಾ ವಿಶ್ವವಿದ್ಯಾಲಯ
# ವಿದ್ಯಾಭ್ಯಾಸ –ಪ್ರಾಚೀನ ಭಾರತದಲ್ಲಿ

—ಜಿ. ಕುಮಾರಪ್ಪ

ವಿದ್ಯೆಯಲ್ಲಿ ಎರಡು ವಿಧ. ಪರಾವಿದ್ಯೆ ಮತ್ತು ಅಪರಾವಿದ್ಯೆ. ಪರಾವಿದ್ಯೆ ತಾರ್ಕಿಕ ಜ್ಞಾನಕ್ಕೆ ಸಂಬಂಧಿಸಿದುದು. ಅಪರಾವಿದ್ಯೆ ಪಾರಮಾರ್ಥಿಕ ಜೀವನಕ್ಕೆ ಸಂಬಂಧಿಸಿದುದು. ಪ್ರಾಚೀನ ಭಾರತದಲ್ಲಿ ಅಪರಾವಿದ್ಯೆಗೆ ಹೆಚ್ಚು ಹೊತ್ತು ನೀಡುತ್ತಿದ್ದರು. ವೈದಿಕ ಕಾಲದಿಂದ ಬುದ್ಧನ ಕಾಲದವರೆಗೆ, ಭಾರತದಲ್ಲಿ 'ವಿದ್ಯಾಸಂಸ್ಥೆ'ಗಳೆಂದು ಕರೆಯಿಸಿಕೊಳ್ಳುತ್ತಿದ್ದ ಕೇಂದ್ರಗಳಿರಲಿಲ್ಲ. ವಿದ್ಯೆಯನ್ನು ಕಲಿಯಬಯಸುವ ಜ್ಞಾನಾರ್ಥಿಯು ಗುರುವಿನ ಬಳಿಗೆ ಹೋಗಿ ಅವನ ಮನೆಯಲ್ಲಿದ್ದುಕೊಂಡು ವಿದ್ಯೆಯನ್ನು ಕಲಿಯಬೇಕಾಗುತ್ತಿದ್ದಿತು. ಆದುದರಿಂದ ಶಿಕ್ಷಣ ಸಾಮಾನ್ಯವಾಗಿ ವ್ಯಕ್ತಿಗತವಾದುದಾಗಿರುತ್ತಿತ್ತು. ವಿದ್ಯಾರ್ಥಿಯ ಆಸಕ್ತಿ, ಅಭಿರುಚಿ, ಕಲಿಕೆಯ ಮಟ್ಟ, ಚುರುಕುತನಗಳನ್ನು ಗಮನದಲ್ಲಿಟ್ಟುಕೊಂಡು ಗುರುವಾದವನು ಶಿಕ್ಷಣ ನೀಡುತ್ತಿದ್ದನು. ಈ ಬಗೆಯ ಗುರುಕುಲಗಳು ಗ್ರಾಮ, ನಗರಗಳಿಂದ ದೂರವಾಗಿ ಅಡವಿಗಳಲ್ಲಿರುತ್ತಿದ್ದುದರಿಂದ ವಿದ್ಯಾರ್ಥಿಯು ಪ್ರಕೃತಿಯೊಂದಿಗೆ ನೇರ ಸಂಬಂಧವನ್ನು ಬೆಳೆಸಿಕೊಳ್ಳುತ್ತಿದ್ದನು. ಅಲ್ಲದೆ, ಅವನು ಶಿಕ್ಷಣ ಮುಗಿಯುವವರೆಗೆ ಗುರುವಿನ ಮನೆಯಲ್ಲಿಯೇ ಇರಬೇಕಾಗುತ್ತಿತ್ತು. ಇದು ಅವನ ಮಾನಸಿಕ ಹಾಗೂ ಪ್ರಾಪಂಚಿಕ ಬದುಕಿನ ಮೇಲೆ ಪ್ರಭಾವ ಬೀರುತ್ತಿತ್ತು.

**ಬುದ್ಧನ ಕಾಲದಲ್ಲಿ :** ಬುದ್ಧನು ಸಾಮಾಜಿಕ ಬೋಧನೆಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದನು. ವಿಹಾರಗಳಲ್ಲಿ ಬೌದ್ಧ ಬಿಕ್ಷುಗಳು ಮತ್ತು ಬಿಕ್ಷುಣಿಯರು ಅಧ್ಯಯನ ನಡೆಸುತ್ತಿದ್ದರು. ಈ ಉದ್ದೇಶದಿಂದ ವಿಹಾರಗಳಲ್ಲಿ ಉತ್ತಮ ಗ್ರಂಥ ಸಂಗ್ರಹ ಇರುತ್ತಿದ್ದಿತು. ಈ ಗ್ರಂಥ ಸಂಗ್ರಹಗಳ ಉಪಯೋಗ ಪಡೆಯಲು ನಾಡಿನ ನಾನಾ ಕಡೆಗಳಿಂದ ಹಾಗೂ ವಿದೇಶಗಳಿಂದ ಜ್ಞಾನ ಪಿಪಾಸುಗಳು ಬರುತ್ತಿದ್ದರು. ಚೀನೀ ಯಾತ್ರಿಕ ಇತ್ಸಿಂಗನು ತಾನು ಭಾರತದಲ್ಲಿದ್ದ ಹದಿಮೂರು ವರ್ಷಗಳಲ್ಲಿ ಹತ್ತು ವರ್ಷಗಳನ್ನು ತಕ್ಷಶಿಲೆಯಲ್ಲಿಯೇ ಕಳೆದಿದ್ದನು. ಗ್ರಂಥಗಳ ಅತ್ಯುತ್ತಮ ಸಂಗ್ರಹವನ್ನು ಹೊಂದಿದ್ದ ಈ ವಿಹಾರಗಳು ತಮ್ಮ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಬಿಕ್ಷು ಬಿಕ್ಷುಣಿಯರೊಂದಿಗೆ ಇತರರನ್ನು ಒಳಗೊಂಡು ವಿದ್ಯಾಭ್ಯಾಸ ಕೇಂದ್ರಗಳಾಗಿರಬೇಕೆಂದು ಡಾ|| ಎಂ. ಚಿದಾನಂದ ಮೂರ್ತಿಯವರು ಯೋಚಿಸುತ್ತಾರೆ. ತಕ್ಷಶಿಲೆ, ವಿಕ್ರಮಶೀಲ, ವಲಭಿ, ನಾಲಂದಾಗಳು ಆ ಕಾಲದ ಪ್ರಸಿದ್ಧ ವಿದ್ಯಾಕೇಂದ್ರಗಳಾಗಿದ್ದವು.

## ನಾಲಂದಾ :

ಇತಿಹಾಸ : 'ನ-ಅಲಂ-ದಾ' ಎಂದರೆ ತಡೆಯಿಲ್ಲದೆ ನಡೆಯುತ್ತಿರುವುದು ಎಂದರ್ಥ. ನಾಲಂದಾದಲ್ಲಿ ತಡೆ ಇಲ್ಲದ ರೀತಿಯಲ್ಲಿ ಶಿಕ್ಷಣ ದೊರೆಯುತ್ತಿದ್ದುದರಿಂದ ಅದಕ್ಕೆ ಈ ಹೆಸರು. ಬಿಹಾರ್ ರಾಜ್ಯದಲ್ಲಿ ಈಗ ( ನೋಡಿ : ಡಾ|| ಎಂ. ಚಿದಾನಂದ ಮೂರ್ತಿ – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪು. ೨೦೬ ) ಇರುವ ಬಾರಾಗಾಂವ್ ಹಳ್ಳಿಯೇ ಆಗಿನ 'ನಾಲಂದಾ' ಆಗಿದ್ದಿತು. ಕ್ರಿ.ಪೂ.ದ ಕಾಲ ದಿಂದಲೂ ಅದು ಅಸ್ತಿತ್ವದಲ್ಲಿದ್ದರೂ ಸಹ, ಶೈಕ್ಷಣಿಕವಾಗಿ ಅದು ಹೆಚ್ಚು ಪ್ರಸಿದ್ಧವಾಗಿ ರಲಿಲ್ಲ. ಅಲ್ಲಿ ವೇದಾಧ್ಯಯನ ಮಾತ್ರ ನಡೆಯುತ್ತಿದ್ದಿತು. ಕ್ರಿ.ಶ. 200 ರಲ್ಲಿ ಮಗಧ ದೇಶದ ದೊರೆ ಬಾಲಾದಿತ್ಯನು ಬೌದ್ಧ ವಿಹಾರವೊಂದನ್ನು ಕಟ್ಟಿಸಿದನು. ನಾಲಂದಾ ವಿಶ್ವವಿದ್ಯಾಲಯಕ್ಕೆ ಇದೇ ಮೂಲೆಗಲ್ಲಾಯಿತು. ಈ ವಿಹಾರದಲ್ಲಿ ಬೌದ್ಧ ಬಿಕ್ಷು ಬಿಕ್ಷುಣಿಯರಿಗಾಗಿ ಗ್ರಂಥ ಸಂಗ್ರಹ ಹಾಗೂ ಪ್ರತಿ ಮಾಡುವ ಕಾರ್ಯ ಪ್ರಾರಂಭವಾಗಿ ಮುಂದಿನ ೧೫೦-೨೦೦ ವರ್ಷಗಳಲ್ಲಿ ವಿಶ್ವವಿದ್ಯಾಲಯದ ವ್ಯಾಪ್ತಿ ಯನ್ನು ಪಡೆದುಕೊಂಡಿತು.

ನಾಲಂದಾವು ವಿಶ್ವವಿದ್ಯಾಲಯವಾಗಿ ಬೆಳೆಯಲು ವಿದ್ವಾಂಸರು ಮೂರು ಮುಖ್ಯ ಕಾರಣಗಳನ್ನು ನೀಡುತ್ತಾರೆ.

೧) ಕ್ರಿ. ಶ ದ ಆರಂಭದ ಕಾಲದಿಂದಲೂ ನಾಲಂದಾವು ಧಾರ್ಮಿಕ ಕೇಂದ್ರ ವಾಗಿದ್ದಿತು. ಬುದ್ಧನು ಅನೇಕ ಭಾರಿ ಇಲ್ಲಿಗೆ ಭೇಟಿ ನೀಡಿ ಶಿಷ್ಯರಿಗೆ ಬೋಧನೆ ನೀಡಿದ್ದನು. ಇದು ಬುದ್ಧನ ಪ್ರಮುಖ ಶಿಷ್ಯರಲ್ಲಿ ಒಬ್ಬನಾದ ಸಾರಿಪುತ್ರ ಹುಟ್ಟಿದ ಸ್ಥಳ. ಜೈನ ತೀರ್ಥಂಕರ ಮಹಾವೀರನು ಗೋಸಲನನ್ನು ಇಲ್ಲಿ ಬೇಟಿಯಾಗಿದ್ದನು.

೨) ಮಗಧ ಸಾಮ್ರಾಜ್ಯದ ರಾಜಧಾನಿ ರಾಜಗೃಹಕ್ಕೆ ಇದು ಹತ್ತಿರದಲ್ಲಿತ್ತು.

೩) ರಾಜರ ನಿರಂತರ ಪ್ರೋತ್ಸಾಹ : ಗುಪ್ತ ಸಾಮ್ರಾಟರು, ಹರ್ಷ, ಪಾಲ-ಸೇನ ದೊರೆಗಳು ನಾಲಂದಾ ವಿಶ್ವವಿದ್ಯಾಲಯದ ಪೋಷಕರಾಗಿದ್ದರು. ದೇಶೀಯ ಅರಸುಗಳಷ್ಟೇ ಅಲ್ಲದೆ ವಿದೇಶೀಯ ಅರಸುಗಳೂ ನಾಲಂದಾ ವಿಶ್ವವಿದ್ಯಾಲಯಕ್ಕೆ ಧನ ಸಹಾಯ ಮಾಡಿದ ಎಷ್ಟೋ ಉದಾಹರಣೆಗಳಿವೆ.

ವಿದ್ಯಾಭ್ಯಾಸ ಪದ್ಧತಿ : ನಾಲಂದಾ ವಿಶ್ವವಿದ್ಯಾಲಯವು ಶಿಕ್ಷಣ ವಿಚಾರದಲ್ಲಿ ಅಂತರ ರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದ್ದಿತು. ಬೌದ್ಧ ಧರ್ಮದ ಯಾವುದೇ ಸಮಸ್ಯೆಗಳಿಗೂ ಇಲ್ಲಿ ಪರಿಹಾರ ದೊರೆಯುತ್ತಿದ್ದಿತು. ಇದೇ ಕಾರಣಕ್ಕಾಗಿ ಜಗತ್ತಿನ ನಾನಾ ಕಡೆಗಳಿಂದ ವಿದ್ವಾಂಸರು ಇಲ್ಲಿಗೆ ಬರುತ್ತಿದ್ದರು.



ಕಾವ್ಯವಾಹಿನಿ

# ಉತ್ತರದ ತಾರೆ

—ಶಾರದಾ ಜಡೆ

ಶಾಂತಿ ಧಾಮದ ಕಡೆಗೆ ಸಾಗಿರುವ ನಾವಿಕಾ
ಶಾಂತಿ ಯೊಂದಿನಿತಿರಲಿ ನಿನ್ನ ಜೊತೆಗೆ;
ಅದೇ ನಿನಗೆ ದಾರಿ ಬುತ್ತಿ.
ಇಂದೇನೋ ಶಾಂತವಿದೆ ಈ ಮಹಾಸಾಗರ.

ತಿಳಿಯನೀಲಾಂಬರ!
ನಗುತಿರುವ ಚಂದಿರ!
ಎಲ್ಲೆಲ್ಲು ಆನಂದ;ಅತ್ಯಂತ ಸುಂದರ.
ಸಾಗು ಸಾಗುತಲಂತೆ
ಎಂತು,ಏನೆಂದುಸುರಲಿ!

ಬಿರುಗಾಳಿ ಎದ್ದೀತು,
ಕಾರಿರುಳು ಕವಿದೀತು,
ಅಬ್ಬರದ ಉಬ್ಬರಕೆ ನೌಕೆ ಹೊಯ್ದಾಡೀತು!
ಆ ಘಳಿಗೆ, ವಿಷ ಘಳಿಗೆ,
ಸಹಿಸಿಕೋ ಒಂದರಘಳಿಗೆ,

ಆಗ ನೀ ಕಂಗೆಟ್ಟು,
ಎದ್ದೆದ್ದು ಎದರಿದೆಯೋ,
ನೌಕೆಯಾಯಿತು ಬುಡ ಮೇಲು,
ನಿನ್ನಾಶೆಯೋ, ನೀರಪಾಲು!
ನಾವಿಗಾ !

ಬೆಳಕು ಕಾಣದ ಕತ್ತಲುಂಟೇ!
ಹುಟ್ಟು ಕೈ ಬಿಡದಂತೆ,
ಮೀಟುತ್ತ ನೀ ಸಾಗು
ದೂರದಾಗಸದಲ್ಲಿ
ಕಂಡೀತು ನಿನಗಾಗ
ಉತ್ತರದ ತಾರೆ!

ಆ ಬೆಳಕನೇ ಬೆಂಬಿಡಿದು
ಮುಂದುಮುಂದಕೆಸಾರು
ಕಡೆಗೊಮ್ಮೆ ದಡಸೇರು.

ಮಹಾಯಾನ ಬೌದ್ಧ ಧರ್ಮವನ್ನು ಮುಖ್ಯವಾಗಿ ಬೋಧಿಸಿದರೂ ಸಹ, ಇಲ್ಲಿ ಅನೇಕ ವಿಷಯಗಳ ಮೇಲೆ ಶಿಕ್ಷಣ ನೀಡಲಾತ್ತಿಗುತ್ತು. ವೇದ, ಯೋಗ, ತರ್ಕ, ವ್ಯಾಕರಣ, ವೈದ್ಯ, ವಿಜ್ಞಾನ ಇತ್ಯಾದಿ ವಿಷಯಗಳನ್ನು ವಿದ್ಯಾರ್ಥಿಗಳು ಇಲ್ಲಿ ಕಲಿಯ ಬಹುದಿತ್ತು.

ಶಬ್ದ ವಿದ್ಯೆ (ವ್ಯಾಕರಣ ಮತ್ತು ಭಾಷಾಶಾಸ್ತ್ರ), ಕಲೆ, ವಿಜ್ಞಾನ ಮತ್ತು ವೈದ್ಯ (ಚಿಕಿತ್ಸಾವೈದ್ಯ), ತರ್ಕಶಾಸ್ತ್ರ, ತತ್ವಶಾಸ್ತ್ರ ಈ ವಿಷಯಗಳು ಕಡ್ಡಾಯವಾಗಿದ್ದವು. ಇದರೊಂದಿಗೆ ವಿದ್ಯಾರ್ಥಿ ತನಗೆ ಬೇಕಾದ ಬೇರೆ ಯಾವುದೇ ವಿಷಯವನ್ನು ಕಲಿಯಬಹುದಿತ್ತು.

ಆದರೆ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆಯುವುದು ಬಹಳ ಕಷ್ಟವಾಗುತ್ತಿತ್ತು. ಇಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿ ದೊದಲೇ ಪಂಡಿತನಾಗಿರಬೇಕಾಗುತ್ತಿತ್ತು. ದ್ವಾರಪಂಡಿತರೆನ್ನುವ ವಿದ್ವಾಂಸರಆಯ್ಕೆ ಸಮಿತಿಯೊಂದು ನಡೆಸುವ ಪ್ರವೇಶ ಪರೀಕ್ಷೆಯಲ್ಲಿ ವಿದೇಶೀಯರೂ ಸೇರಿದಂತೆ, ಹತ್ತಕ್ಕೆ ಇಬ್ಬರು ಅಥವಾ ಮೂವರು ಮಾತ್ರ ಉತ್ತೀರ್ಣರಾಗುತ್ತಿದ್ದರು. ಇಲ್ಲಿ ಅಧ್ಯಯನ ಮಾಡಿದ ಎಷ್ಟೋ ಜನರು ಜಗದ್ವಿಖ್ಯಾತರಾಗಿದ್ದಾರೆ. ಯೋಗ ಶಾಸ್ತ್ರದಲ್ಲಿ ಭರತಖಂಡದಲ್ಲೆಲ್ಲಾ ಅದ್ವಿತೀಯರೆನಿಸಿದ್ದ ಶೀಲಭದ್ರರು ಇಲ್ಲಿಯೇ ಅಧ್ಯಯನ ಮಾಡಿ, ಇದರ ಅಧ್ಯಕ್ಷರಾಗಿದ್ದರು. ನಾಗಾರ್ಜುನ, ಆರ್ಯದೇವ (ಮಾಧ್ಯಮಿಕ ಪಂಥದ ಸ್ಥಾಪಕ), ಅಸಂಗ (ಯೋಗಾಚಾರ ಪಂಥದ ಸ್ಥಾಪಕ), ವಸುಬಂಧು, ದಿಜ್ನಾಗ ಮುಂತಾದವರು ಇಲ್ಲಿನ ವಿದ್ಯಾರ್ಥಿಗಳಾಗಿದ್ದರು.

ಬಹುಪಾಲು ಶಿಕ್ಷಣ ಪದ್ಧತಿ ಮೌಖಿಕವಾದುದಾಗಿರುತ್ತಿತ್ತು. ಪ್ರತಿ ಐದು ಆರು ವಿದ್ಯಾರ್ಥಿಗಳಿಗೆ ಒಬ್ಬರು ಉಪಾಧ್ಯಾಯರಿರುತ್ತಿದ್ದರು. ತಮುವಾನ್‌ಚ್ವಾಂಗ್‌ನ ಕಾಲದಲ್ಲಿದ್ದ ೮,೫೦೦ ವಿದ್ಯಾರ್ಥಿಗಳಿಗೆ ೧,೫೧೦ ಜನ ಉಪಾಧ್ಯಾಯರಿದ್ದರು. ಇವರೆಲ್ಲರೂ ಮೇಧಾವಿ ಶ್ರೇಷ್ಠರಾಗಿರುತ್ತಿದ್ದರು. ವಿದ್ಯಾರ್ಥಿಗಳ ಸಂಖ್ಯೆ ಕಡಿಮೆ ಇರುತ್ತಿದ್ದುದರಿಂದ ಉಪಾಧ್ಯಾಯನು ವಿದ್ಯಾರ್ಥಿಯ ಬಗ್ಗೆ ವೈಯಕ್ತಿಕ ಗಮನ ನೀಡಿ ಅವನ ಕಲಿಕೆಯ ಮಟ್ಟವನ್ನು ಆಧರಿಸಿ ಪಾಠಹೇಳಿಕೊಡುತ್ತಿದ್ದರು.

ಬೆಳಗಿನಿಂದ ಸಂಜೆಯವರೆಗೆ ಅಧ್ಯಯನ ಪರವಾದ ಚರ್ಚೆಗಳು ನಡೆಯುತ್ತಿದ್ದವು. ಹಿರಿಯರು ಕಿರಿಯರೆನ್ನುವ ಭೇದವಿಲ್ಲದೆ ಎಲ್ಲರೂ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು.

**ಗ್ರಂಥಾಲಯ :** ನಾಲಂದಾ ವಿಶ್ವವಿದ್ಯಾಲಯದ ಗ್ರಂಥಾಲಯವು ವಿಶ್ವ ವಿಖ್ಯಾತವಾದುದೂ ಇತಿಹಾಸ ಪ್ರಸಿದ್ಧವಾದುದೂ ಆಗಿದ್ದಿತು. ಸುಮಾರು ಏಳು ನೂರು ವರ್ಷಗಳವರೆಗೆ ಅವ್ಯಾಹತವಾಗಿ ಇಲ್ಲಿ ಗ್ರಂಥಗಳನ್ನು ರಕ್ಷಿಸಿಡುವ, ಪ್ರತಿ

ಮಾಡುವ ಕೆಲಸ ನಡೆಯುತ್ತಿತ್ತು. ಪ್ರತಿ ವರ್ಷವೂ ಗ್ರಂಥಪ್ರತಿ ಮಾಡಲು ನಿರ್ದಿಷ್ಟ ಮೊತ್ತದ ಹಣವನ್ನು ತೆಗೆದಿರಿಸಲಾಗುತ್ತಿತ್ತು. ಇಲ್ಲಿ ಜಗತ್ಪ್ರಸಿದ್ಧವಾದ ಹಾಗೂ ಅಪರೂಪದ ಗ್ರಂಥಗಳನ್ನು ರಕ್ಷಿಸಿಡಲಾಗಿದ್ದಿತು. 'ರತ್ನಸಾಗರ', 'ರತ್ನದಧಿ' ಮತ್ತು 'ರತ್ನರಂಜಕ' ಎನ್ನುವ ಮೂರು ದೊಡ್ಡ ಕಟ್ಟಡಗಳಲ್ಲಿ ಗ್ರಂಥಗಳನ್ನು ಸಂಗ್ರಹಿಸಿಡಲಾಗಿದ್ದಿತು. ಇವುಗಳನ್ನು ಒಟ್ಟಾಗಿ 'ಧರ್ಮಗುಂಜ' ಎಂದು ಕರೆಯುತ್ತಿದ್ದರು. ಇವುಗಳಲ್ಲಿ 'ರತ್ನದಧಿ'ಯು ಒಂಭತ್ತು ಅಂತಸ್ತುಗಳನ್ನುಳ್ಳ ಕಟ್ಟಡವಾಗಿದ್ದಿತು.

**ವಿಶ್ವವಿದ್ಯಾಲಯದ ಆಡಳಿತ :** ಬಹುಪಾಲು ಆಡಳಿತ ವರ್ಗವು ಪ್ರಜಾಪ್ರಭುತ್ವ ಪದ್ಧತಿಯಲ್ಲಿ ನಡೆಯುತ್ತಿದ್ದಿತು. ವಿದ್ಯಾರ್ಥಿಗಳು ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸಬಹುದಿತ್ತು. ವಿಹಾರಪಾಲ, ವಿಹಾರಸ್ವಾಮಿ, ಕರ್ಮದನ, ಅರಮಿಕ, ನವಕಮ್ಮಿಕ ಇತ್ಯಾದಿಗಳು ವಿವಿಧ ದರ್ಜೆಯ ಹುದ್ದೆಗಳಾಗಿದ್ದವು. ಎಲ್ಲಾ ಶಾಸ್ತ್ರಗಳಲ್ಲಿಯೂ ಪಾರಂಗತರಾದವರು ವಿಶ್ವವಿದ್ಯಾಲಯದ ಅಧ್ಯಕ್ಷರಾಗಿದ್ದರು. ಬೇರೆ ಬೇರೆ ವಿಹಾರಗಳಿಗೆ ನಾಲಂದಾ ವಿಶ್ವವಿದ್ಯಾಲಯವು ಮಾನ್ಯತೆ ನೀಡುತ್ತಲಿದ್ದಿತು.

**ವಿಶ್ವವಿದ್ಯಾಲಯದ ಕಟ್ಟಡ ಮತ್ತು ಆವರಣ :** ನಾಲಂದಾ ವಿಶ್ವವಿದ್ಯಾಲಯವು ಒಂದೇ ಒಂದು ಆವರಣದಲ್ಲಿ ಬೆಳೆದಿದ್ದಿತು. ಏಳು ವಿಹಾರಗಳು, ಎಂಟು ಬಹು ಅಂತಸ್ತಿನ ಕಟ್ಟಡಗಳೂ, ಸಭಾಂಗಣಗಳು ಸುಮಾರು ಹತ್ತುಸಾವಿರದಿಂದ ಹದಿನೈದು ಸಾವಿರ ವಿದ್ಯಾರ್ಥಿಗಳಿಗೆ ಸ್ಥಳಾವಕಾಶವನ್ನು ಒದಗಿಸಿದ್ದವು. ಕಟ್ಟಡಗಳನ್ನು ಆಧುನಿಕ ರೀತಿಯಲ್ಲಿ ಕಟ್ಟಲಾಗಿದ್ದಿತು. ಬಹು ಅಂತಸ್ತಿನ ಈ ಕಟ್ಟಡಗಳು ಅಗಲವಾದ ಮೆಟ್ಟಿಲುಗಳನ್ನು ವಿಶಾಲವಾದ ಕಿಟಕಿಗಳನ್ನು ಹೊಂದಿದ್ದವು. "ಕೊಠಡಿಯಲ್ಲಿ ಕುಳಿತುಕೊಂಡೇ ಸಂಜೆಯ ಸೂರ್ಯನ ಸೊಬಗನ್ನು ಸವಿಯಬಹುದಿತ್ತು. ಮತ್ತು ಧ್ಯಾನಮಗ್ನರಾಗಬಹುದಿತ್ತು" ಎಂದು ಹ್ಯುಯನೆ ತ್ಸಾಂಗನು ಹೇಳಿದ್ದಾನೆ.

ವಿದೇಶಿ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾದ ಕಟ್ಟಡಗಳಿದ್ದವು. ಜಾವಾ ದ್ವೀಪದ ದೊರೆ ಬಾಲಪುತ್ರದೇವನ ಕೇಳಿಕೆಯಂತೆ ದೇವ ಪಾಲದೇವನು ಕಟ್ಟಿಸಿದ್ದ "ವಿಹಾರ ಕರೀತ" ವು ಜಾವಾ ವಿದ್ಯಾರ್ಥಿಗಳ ವಸತಿಗೃಹವಾಗಿದ್ದಿತು.

ವಿಶ್ವವಿದ್ಯಾಲಯದ ಆವರಣದಲ್ಲಿ ಮಾವು ಹಾಗೂ ಕನಕವೃಕ್ಷಗಳು ಒತ್ತೊತ್ತಾಗಿ ಬೆಳೆದು ತಣ್ಣೆಳಲನ್ನು ನೀಡುತ್ತಿದ್ದವು. ಆವರಣದಲ್ಲಿ ಅಲ್ಲಲ್ಲಿ ತಣ್ಣೀರಿನ ಕೊಳಗಳಿದ್ದವಲ್ಲದೆ, ಸಣ್ಣ ಕಾಲುವೆಗಳು ಆವರಣವನ್ನು ಸುತ್ತುವರೆದಿದ್ದವು. ಆವರಣದ ಸುತ್ತಲೂ ದೊಡ್ಡ ಗೋಡೆಯನ್ನು ಕಟ್ಟಲಾಗಿದ್ದಿತು.

**ಆರ್ಥಿಕ ವಿಚಾರ :** ಇಲ್ಲಿನ ಶಿಕ್ಷಣವು ಸಂಪೂರ್ಣವಾಗಿ ಉಚಿತವಾದುದಾಗಿ

ರುತ್ತಿತ್ತು. ತನ್ನ ಶಿಕ್ಷಣಕ್ಕಾಗಿ ವಿದ್ಯಾರ್ಥಿ ಯಾವುದೇ ಬಗೆಯ ಹಣವನ್ನಾಗಲೀ, ವಸ್ತುವನ್ನಾಗಲೀ, ನೀಡಬೇಕಾಗಿರಲಿಲ್ಲ. ಅನೇಕ ಶ್ರೀಮಂತರು, ರಾಜಮಹಾರಾಜರು ವಿಶ್ವವಿದ್ಯಾಲಯಕ್ಕೆ ಉದಾರವಾಗಿ ಸಹಾಯ ಮಾಡುತ್ತಿದ್ದರು. ದಾನವು ಹಣದ ರೂಪಕ್ಕಿಂತ ವಸ್ತುವಿನ ರೂಪದಲ್ಲಿ ಇರುತ್ತಿತ್ತು. ಹರ್ಷವರ್ಧನನು ವಿಶ್ವವಿದ್ಯಾಲಯದ ವೆಚ್ಚಕ್ಕೆ ಒಂದು ನೂರು ಗ್ರಾಮಗಳನ್ನು ದತ್ತಿಯಾಗಿ ಕೊಟ್ಟಿದ್ದನು. ಕ್ರಿ.ಶ. ೬೭೫ ರ ಸುಮಾರಿನಲ್ಲಿ ಈ ಗ್ರಾಮಗಳ ಸಂಖ್ಯೆ ಇನ್ನೂರಾಗಿದ್ದಿತು. ವಿಶ್ವವಿದ್ಯಾಲಯದ ಸಂಪೂರ್ಣ ವೆಚ್ಚವನ್ನು ಈ ಗ್ರಾಮಗಳ ಕಂದಾಯ ಹಾಗೂ ಭೂಮಿಯಿಂದ ಪಡೆಯ ಬೇಕಾಗುತ್ತಿದ್ದಿತು. ವಿಶ್ವವಿದ್ಯಾಲಯಕ್ಕೆ ಬೇಕಾದ ಹೈನುವಸ್ತುಗಳಿಗಾಗಿ ಗೋ-ಸಂಪತ್ತನ್ನು ವಿಶ್ವವಿದ್ಯಾಲಯ ಹೊಂದಿದ್ದಿತು.

ವಿದೇಶದ ಎಷ್ಟೋ ರಾಜರುಗಳು ತಮ್ಮ ದೇಶದ ವಿದ್ಯಾರ್ಥಿಗಳಿಗೆ ಅನುಕೂಲ ವಾಗುವಂತೆ ದತ್ತಿಗಳನ್ನು ಸ್ಥಾಪಿಸಿದ್ದರು. ಈ ದತ್ತಿಗಳು ವಿದ್ಯಾರ್ಥಿಗಳಿಗೆ ಊಟ, ವಸತಿ, ವಸ್ತ್ರ, ಔಷಧೋಪಚಾರ, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸುತ್ತಿದ್ದವು.

**ವೈಶಿಷ್ಟ್ಯ :** ಅಂತರರಾಷ್ಟ್ರೀಯ ಖ್ಯಾತಿಯನ್ನು ಹೊಂದಿದ್ದ ನಾಲಂದಾ ವಿಶ್ವವಿದ್ಯಾಲಯವು ಅನೇಕ ವಿಚಾರಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದ್ದಿತು. ಇಂದಿನ ವಿಶ್ವವಿದ್ಯಾಲಯಗಳ ಪರಿಸ್ಥಿತಿಯನ್ನು ಗಮನಿಸಿದಾಗ ನಾಲಂದಾ ವಿಶ್ವವಿದ್ಯಾಲಯದ ವೈಶಿಷ್ಟ್ಯ ಕೇವಲ ಅಂದಿನ ಕಾಲಕ್ಕಷ್ಟೇ ವಿಶಿಷ್ಟಪೂರ್ಣವಾದುದಾಗಿರದೆ ಇಂದಿಗೂ ಮಾದರಿಯದಾದುದಾಗಿದೆ.

ಅಂದಿನ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಆಡಳಿತದಲ್ಲಿ ಸಕ್ರಿಯವಾಗಿ ಭಾಗ ವಹಿಸುತ್ತಿದ್ದರು. ವಸತಿ ಗೃಹಗಳನ್ನು ಪ್ರತಿವರ್ಷವೂ ಹೊಸ ವಿದ್ಯಾರ್ಥಿಗಳಿಗೆ ಹಂಚುವ ಕೆಲಸವನ್ನು ನೋಡಿಕೊಳ್ಳುತ್ತಿದ್ದರು.

ವಿಶ್ವವಿದ್ಯಾಲಯ ಏಳುನೂರು ವರ್ಷಗಳ ಇತಿಹಾಸದಲ್ಲಿ ಒಮ್ಮೆಯೂ ವಿದ್ಯಾರ್ಥಿಗಳು ಆಡಳಿತದ ವಿರುದ್ಧ ನಿಂತ ಉದಾಹರಣೆ ಇಲ್ಲ !

ಬೌದ್ಧ ಬಿಕ್ಷುಣಿಯರಿಗೂ ಇಲ್ಲಿ ಕಲಿಯಲು ಅವಕಾಶವಿದ್ದಿತು. ಆದರೆ ಬಿಕ್ಷುಗಳ ಕೊಠಡಿಗೆ ಬಿಕ್ಷುಣಿಯಾಗಲಿ, ಬಿಕ್ಷುಣಿಯರ ಕೊಠಡಿಗಳಿಗೆ ಬಿಕ್ಷುಗಳಾಗಲಿ ಹೋಗು ವಂತಿರಲಿಲ್ಲ. ಕಾನೂನುಗಳನ್ನು ಕಟ್ಟುನಿಟ್ಟಾಗಿಪಾಲಿಸುತ್ತಿದ್ದರು.

ಇವೆಲ್ಲವುಗಳಿಗಿಂತಲೂ ಮುಖ್ಯವಾದುದು ನಾಲಂದಾ ವಿಶ್ವವಿದ್ಯಾಲಯದಲ್ಲಿ ವಿದೇಶಿ ವಿದ್ಯಾರ್ಥಿಗಳನ್ನು ಸಂಪೂರ್ಣವಾಗಿ ಭಾರತೀಯಗೊಳಿಸಲಾಗುತ್ತಿತ್ತು. ಅವರ ನಡೆನುಡಿ, ಹೆಸರೂ ಸಹ ಭಾರತೀಯವಾಗುತ್ತಿದ್ದವು. ಉದಾಹರಣೆಗೆ ಹ್ಯೂಯೆನ್ ಚಾಂಗ್ ಪ್ರಕಾಶಮತಿಯೆಂದು, ತೋ-ಹಿ ಯು ಶ್ರೀದೇವನೆಂದು, ತುಕಾರೆಸ್ತಾನ್‌ನು

ಬುದ್ಧಧರ್ಮನೆಂದೂ, ಟಾವೋ-ಲಿನ್‌ನು ಶೀಲಭದ್ರನೆಂದೂ ಹೆಸರು ಬದಲಾಯಿಸಿಕೊಂಡಿದ್ದರು. ಎಷ್ಟೋ ವಿದೇಶಿಯರು ಈ ವಿಶ್ವವಿದ್ಯಾಲಯದಿಂದ ಆಕರ್ಷಿತರಾಗಿ ತಮ್ಮ ತಾಯ್ನಾಡಿಗೆ ಹಿಂತಿರುಗದೆ ಇಲ್ಲಿಯೇ ನೆಲಸಿ ಸಂಸ್ಕೃತದ ಧಾರ್ಮಿಕ ಕೃತಿಗಳನ್ನು ತಮ್ಮ ಮಾತೃಭಾಷೆಗೆ ಅನುವಾದಿಸುವ ಕೆಲಸವನ್ನು ಕೈಗೊಂಡಿದ್ದರು.

**ಅವನತಿ :** ಭಾರತದಲ್ಲಿ ಬೌದ್ಧಧರ್ಮದ ಅವನತಿಯೊಂದಿಗೆ ನಾಲಂದಾ ವಿಶ್ವವಿದ್ಯಾಲಯದ ಅವನತಿಯೂ ಪ್ರಾರಭವಾಯಿತು. ಇತಿಹಾಸದ ಏರುಪೇರುಗಳೊಂದಿಗೆ ಇದರ ಅವನತಿ ಉನ್ನತಿಗಳೂ ಬದಲಾಗುತ್ತಿದ್ದವು. ಮುಸ್ಲಿಂದಾಳಿಕಾರರು ಸ್ವಲ್ಪ ಸ್ವಲ್ಪವಾಗಿ ಇದನ್ನು ಹಾಳುಗೆಡವಲಾರಂಭಿಸಿದರು. ಇಲ್ಲಿನ ಕಟ್ಟಡಗಳು ಇವರ ದಾಳಿಗೆ ಸಿಕ್ಕು ಭಗ್ನಾವಶೇಷವಾಗಹತ್ತಿದವು. ಆದರೂ ವಿಶ್ವವಿದ್ಯಾಲಯವನ್ನು ಸುಸ್ಥಿತಿಯಲ್ಲಿಡುವ ಕ್ಷೀಣ ಯತ್ನ ಆಗಿಂದಾಗ್ಗೆ ನಡೆಯುತ್ತಿತ್ತು. ಮುದಿತಭದ್ರನೆಂಬ ಬೌದ್ಧ ಸನ್ಯಾಸಿಯೊಬ್ಬನು ಹಾಳಾದ ಕಟ್ಟಡಗಳನ್ನು ಮತ್ತೆ ಕಟ್ಟಿಸಿದ್ದನು. ಕುಕುತ-ಸಿದ್ಧನೆಂಬುವವನು ವಿಹಾರವೊಂದನ್ನು ಕಟ್ಟಿಸಿದ್ದನು.

ಆದರೆ, ನಾಲಂದಾದ ಅವನತಿಯನ್ನು ನಿಲ್ಲಿಸಲಾಗಲಿಲ್ಲ. ದಾಳಿಕಾರರಿಂದ ಪದೇಪದೇ ಹಾನಿಗೊಳಗಾಗುತ್ತಿದ್ದ ವಿಶ್ವವಿದ್ಯಾಲಯ ೧೩ನೇಯ ಶತಮಾನದಲ್ಲಿ ಆದ ಅಗ್ನಿ ಆಕಸ್ಮಿಕವೊಂದರಲ್ಲಿ ಸಂಪೂರ್ಣವಾಗಿ ಸುಟ್ಟುಹೋಯಿತು. ಈ ವಿಚಾರದಲ್ಲಿ ಕತೆಯೊಂದು ಪ್ರಚಾರದಲ್ಲಿದೆ.

ಕುಕುತಸಿದ್ಧನು ವಿಹಾರವನ್ನು ಕಟ್ಟಿಸಿದ ಮೇಲೆ ಒಮ್ಮೆ ಧಾರ್ಮಿಕ ವಿಧಿಯೊಂದನ್ನು ಆಚರಿಸುತ್ತಿದ್ದಾಗ ತೀರ್ಥಂಕರ ಬಿಕ್ಷುಗಳಿಬ್ಬರು ವಿಹಾರದೊಳಕ್ಕೆ ಬಂದರು. ಬೌದ್ಧ ಸನ್ಯಾಸಿಗಳಾಗಲಿದ್ದ ಕುಚೋದ್ಯಿಗಳಿಬ್ಬರು ಪರಿಹಾಸಕ್ಕಾಗಿ ಅವರ ಮೇಲೆ ಮೈಲಿಗೆಯ ನೀರನ್ನೆರಚಿದರು. ಇದರಿಂದ ಕುಪಿತಗೊಂಡ ತೀರ್ಥಂಕರ ಬಿಕ್ಷುಗಳು ಹನ್ನೆರಡು ವರ್ಷಗಳ ಪ್ರಯತ್ನದಿಂದ ಸೂರ್ಯನನ್ನು ಒಲಿಸಿಕೊಂಡು ಯಜ್ಞವೊಂದನ್ನು ಮಾಡಿದರು. ಅಗ್ನಿಕುಂಡದೊಳಗಿನಿಂದ ಕೆಂಡದುಂಡೆಗಳನ್ನು, ಬೂದಿಯನ್ನು ತೆಗೆದುಕೊಂಡು ವಿಹಾರದೊಳಕ್ಕೆ ತೂರಲಾರಂಭಿಸಿದರು. ಕೆಂಡದುಂಡೆಗಳಿಂದ ಅಗ್ನಿಜ್ವಾಲೆ ಹೊರಹೊಮ್ಮಿ ರತ್ನದಧಿಯನ್ನು ಇತರ ಕಟ್ಟಡಗಳನ್ನು ದಹಿಸಿತು. ನೂರಾರು ವರ್ಷಗಳವರೆಗೆ ಮೆರೆದು, ಸಾವಿರಾರುಜನ ಜ್ಞಾನಪಿಪಾಸುಗಳಿಗೆ ಜ್ಞಾನಸುಧೆಯನ್ನು ನೀಡಿ, ಸಾವಿರಾರು ಜನ ವಿದ್ವಾಂಸರನ್ನು ಜಗತ್ತಿಗೆ ನೀಡಿದ 'ನಾಲಂದಾ' ಕೊನೆಯಲ್ಲಿ ಕ್ಷಣಾರ್ಧದ ಅಗ್ನಿಗೆ ತನ್ನೆಲ್ಲಾ ಭಂಡಾರವನ್ನು ಅರ್ಪಿಸಿ, ಇತಿಹಾಸದ ಗತಸ್ಮಾರಕವಾಗಿ ಉಳಿದುಹೋಯಿತು. 'ನಾಲಂದಾ' ದೊಂದಿಗೆ ಭಾರತೀಯ ಶಿಕ್ಷಣ ಪರಂಪರೆಯ ಪ್ರಮುಖ ಅಧ್ಯಾಯವೊಂದು ಮುಗಿದು ಹೋಯಿತು.

(10ನೇ ಪುಟದಿಂದ)

ಜೀವನದಲ್ಲಿ ನಗು ಮತ್ತು ಅಳು ಎರಡುಮುಖಗಳು. ದುಃಖವು ಆತ್ಮವನ್ನು ಮಥಿಸಿ ಸತ್ವವನ್ನು ಎತ್ತಿ ತೋರಿದರೆ; ನಗು ಆತ್ಮದ ಪರಿಮಳವನ್ನು ಪಸರಿಸುವಂತೆ ಮಾಡುತ್ತದೆ. ಈ ಎರಡೂ ಪಾಕಗಳು ನಮಗೆ ಬೇಕೆಂದಿರುವ ದಾರ್ಶನಿಕ ಕವಿ ಡಿ.ವಿ.ಜಿ. ಜೀವನದಲ್ಲಿ ನಗೆಯ ಮಹತ್ವದ ಬಗ್ಗೆ ಹೇಳಿರುವ ಮಾತು ಮನನೀಯವಾಗಿದೆ :—

ನಗುವುದು ಸಹಜದ ಧರ್ಮ, ನಗಿಸುವುದು ಪರಧರ್ಮ
ನಗುವ ಕೇಳುತ ನಗುವುದತಿಶಯದ ಧರ್ಮ
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ
ಹೀಗೆ ನೀನು ಬೇಡಿಕೊಳ್ಳೊ ಮಂಕುತಿಮ್ಮ

ನಗುವಿಲ್ಲದ ಜೀವನ ದೇವರಿಲ್ಲದ ಗುಡಿ, ಪಾಳ್ಗುಡಿ; ಅದು ಜೀವವಿಲ್ಲದ ದೇಹ, ಹೆಣ. ಸಂಸ್ಕಾರ ವಿಶೇಷದಿಂದ ಹದಗೊಂಡು ಮೂಡಿಬಂದ ನಗು ಆತ್ಮದ ಪರಿಮಳವನ್ನು ಹೊಮ್ಮಿಸುವ, ಆ ಸುವಾಸನೆಯಲ್ಲಿ ಜೀವಿ ಆರೋಗ್ಯಕರವಾಗಿ ಮುದದಿಂದ ಬಾಳುವ ಅಪೂರ್ವ ಅವಕಾಶವನ್ನು ಒದಗಿಸುತ್ತದೆ. ಆದ್ದರಿಂದ ನಗುವ, ನಗಿಸುವ, ನಗಿಸಿ ನಗುತ ಬಾಳುವ ಪರಿಯನ್ನು ನಾವು ಕಲಿಯೋಣ. ●

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.